# ಡೆಂಗಿ ಜ್ವರ ತಡೆಗಟ್ಟುವ ಬಗ್ಗೆ ಮುಂಜಾಗ್ರತೆ ಕ್ರಮಗಳು

## ಡೆಂಗಿ ಜ್ವರ ಎಂದರೇನು?

ಡೆಂಗಿ ಜ್ವರವು ಡೆಂಗಿ ವೈರಸ್‌ನಿಂದ ಉಂಟಾಗುವ ಕಾಯಿಲೆ. ಈ ಕಾಯಿಲೆಯು ಸೋಂಕು ಹೊಂದಿದ ಈಡಿಸ್ ಈಜಿಪ್ಟೈ ಎಂಬ ಸೊಳ್ಳೆಯ ಕಚ್ಚುವಿಕೆಯಿಂದ ಒಬ್ಬರಿಂದ ಒಬ್ಬರಿಗೆ ಹರಡುತ್ತದೆ.

## ಈ ರೋಗದ ಮುಖ್ಯ ಲಕ್ಷಣಗಳು

ಇದ್ದಕ್ಕಿದ್ದಂತೆ ತೀವ್ರಜ್ವರ, ವಿಪರೀತ ತಲೆನೋವು, ಕಣ್ಣುಗಳ ಹಿಂಭಾಗದಲ್ಲಿ ನೋವು, ಮಾಂಸಖಂಡ ಮತ್ತು ಕೀಲುಗಳಲ್ಲಿ ನೋವು ಕಾಣಿಸಿಕೊಳ್ಳುವುದು ಈ ರೋಗದ ಲಕ್ಷಣ. ಹಲವು ಬಾರಿ ಮೂಗು, ಬಾಯಿ ಮತ್ತು ವಸಡುಗಳಲ್ಲಿ ರಕ್ತಸ್ರಾವದ ಚಿಹ್ನೆಗಳು ಕಂಡುಬರುತ್ತವೆ. ಈ ಲಕ್ಷಣಗಳು ಕಂಡುಬಂದಲ್ಲಿ ತಕ್ಷಣ ಹತ್ತಿರದ ಸರ್ಕಾರಿ ಆಸ್ಪತ್ರೆಗೆ ದಾಖಲಿಸಿ, ರಕ್ತಪರೀಕ್ಷೆ ಮಾಡಿಸಿ, ಸೂಕ್ತ ಚಿಕಿತ್ಸೆ ಪಡೆಯುವುದು.

## ಸಾರ್ವಜನಿಕರು ಡೆಂಗಿ ರೋಗವನ್ನು ತಡೆಗಟ್ಟಲು ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳು

1) ಡೆಂಗಿ ಹರಡುವ ಈಜಿಪ್ಟ್ ಸೊಳ್ಳೆಗಳು ಮನೆಯಲ್ಲಿನ ನೀರು ಶೇಖರಿಸುವ ಸಿಮೆಂಟ್ ತೊಟ್ಟಿಗಳು, ಬ್ಯಾರೆಲ್‌ಗಳು, ಡ್ರಮ್‌ಗಳು, ಏರ್‌ಕೂಲರ್, ಹೂಕುಂಡದ ನೀರಿನ ಸಂಗ್ರಹಗಳು, ಇತ್ಯಾದಿಗಳಲ್ಲಿ ಉತ್ಪತ್ತಿಯಾಗುವುದರಿಂದ ಇವುಗಳನ್ನು ವಾರಕ್ಕೊಮ್ಮೆ ಸಂಪೂರ್ಣವಾಗಿ ಶುಚಿಗೊಳಿಸಿ, ಯಾವಾಗಲೂ ಭದ್ರವಾದ ಮುಚ್ಚಳಿಕೆಯಿಂದ ಮುಚ್ಚಿ ಸೊಳ್ಳೆ ಉತ್ಪತ್ತಿಯಾಗದಂತೆ ಎಚ್ಚರವಹಿಸಿ.

2) ಬಯಲಲ್ಲಿ ಪೈರು, ಎಳನೀರಿನ ಚಿಪ್ಪು ಮತ್ತು ತ್ಯಾಜ್ಯ ವಸ್ತುಗಳಲ್ಲಿ ನೀರು ಸಂಗ್ರಹವಾಗದಂತೆ ಸೂಕ್ತ ವಿಲೇವಾರಿ ಮಾಡುವುದು ಅಥವಾ ನಾಶಗೊಳಿಸುವುದು.

3) ಈ ರೋಗ ಹರಡುವ ಸೊಳ್ಳೆಗಳು ಹಗಲಲ್ಲಿ ಕಚ್ಚುವುದರಿಂದ ಸೊಳ್ಳೆ ಕಡಿತದಿಂದ ಪಾರಾಗಲು ಮಕ್ಕಳು, ವಿಶ್ರಾಂತಿ ಪಡೆಯುವ ವಯೋವೃದ್ಧರು, ಕಾಯಿಲೆಯಿಂದ ನರಳುವವರು ತಪ್ಪದೇ ಸೊಳ್ಳೆಪರದೆಯನ್ನು ಉಪಯೋಗಿಸುವುದು ಹಾಗೂ ಇತರೆ ಸೊಳ್ಳೆ ನಿರೋಧಕಗಳನ್ನು ಬಳಸುವುದು. ಹೀಗೆ ಮಾಡುವುದರಿಂದ ಈ ರೋಗವನ್ನು ತಡೆಗಟ್ಟುವುದು ಸುಲಭ.

**ನಿಮ್ಮ ಮನೆಯ ಒಳಗೆ ಹಾಗೂ ಮನೆಯ ಸುತ್ತಮುತ್ತ ಸೊಳ್ಳೆ ಉತ್ಪತ್ತಿಯನ್ನು ತಡೆಗಟ್ಟಿ ಡೆಂಗಿ ಜ್ವರ ನಿಯಂತ್ರಿಸಿ**


ಕರ್ನಾಟಕ ವಾರ್ತೆ

# ನಮ್ಮ ಮಾನಸ

ಅಕ್ಟೋಬರ್ 2011
ಸಂಪುಟ : 5    ಸಂಚಿಕೆ : 6

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*

*ಸಂಪಾದಕ ಮಂಡಳಿ*
**ಚಂಪಾವತಿ ಹೆಚ್.ಎಸ್., ಸವಿತಾ ಎ.**
**ವೆಂ. ವನಜಾ, ಗೀತಾ, ಎಚ್.ಎಸ್. ಪುಷ್ಪಾ.**

*ಸಲಹೆ – ಸಹಕಾರ*
**ಇಳಾ ವಿಜಯಾ, ಸುಮಿತ್ರಾಬಾಯಿ ಬಿ.ಎನ್.**

*ಮಾನಸ ಬಳಗ*
**ತಸ್ನೀಂ ತಾಜ್, ವೇದವಲ್ಲಿ ಜಿ.ವಿ.**
**ವತ್ಸಲ ವೈ.ಎನ್., ಶ್ಯಾಮಲ, ತಾಜುಮಾ**

*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | **8–00 ರೂ.** |
| **ವಾರ್ಷಿಕ ಚಂದಾ** | **100–00 ರೂ.** |
| (ವಿಶೇಷ ಸಂಚಿಕೆಯೊಂದಿಗೆ) | |
| **ಸಂಸ್ಥೆಗಳಿಗೆ** | **150–00 ರೂ.** |

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

*ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ*

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ,*
*ವಿಜಯನಗರ, ಮೈಸೂರು – 570 017*

**ಪ್ರಾರಂಭ : 'ಮಾನುಷಿ' (1985ರಲ್ಲಿ),**
**ಅನಂತರ 'ಮಾನಸ',**
**ಈಗ 'ನಮ್ಮ ಮಾನಸ'**





# ಕೌಟುಂಬಿಕ ಹಿಂಸೆಯ ವಿರಾಟ್ 'ದರ್ಶನ್'

*ಪ್ರಿಯ ಸಿನಿಮಾ ಬಾಂಧವರೇ,*

ಸಿನಿಮಾ ಪ್ರಪಂಚದಲ್ಲಿ ನಡೆಯುತ್ತಿರುವ ಹೆಣ್ಣಿನ ಮೇಲಿನ ಹಿಂಸೆಯ ಆಯಾಮಗಳು ನಮ್ಮನ್ನು ಬೆಚ್ಚಿಸಿರುವುದಲ್ಲದೇ, ಆಘಾತವನ್ನೂ ಉಂಟುಮಾಡಿವೆ. ಹಾಗಾಗಿ ನಾವು ಬೆಂಗಳೂರಿನ ಅನೇಕ ಮಹಿಳಾ ಸಂಘಟನೆಗಳು, ಪ್ರಗತಿಪರ ಸಂಘಟನೆಗಳು ಹಾಗೂ ಮಾನವ ಹಕ್ಕುಗಳ ಸಂಘಟನೆಗಳು ಈ ಬಹಿರಂಗ ಪತ್ರವನ್ನು ತಮಗೆ ಬರೆಯುತ್ತಿದ್ದೇವೆ. ಈ ಮೂಲಕ ಸಿನೆಮಾ ಪ್ರಪಂಚದಲ್ಲಿ ನಡೆಯುತ್ತಿರುವ ಮಹಿಳೆಯ ಮೇಲಿನ ಅಮಾನವೀಯ ದೌರ್ಜನ್ಯಕ್ಕೆ ನಮ್ಮ ವಿರೋಧ ದಾಖಲಿಸುವುದಲ್ಲದೇ ತಮ್ಮ ಜೊತೆ ಒಂದು ಸಂವಾದ ನಡೆಸುವುದೂ ಕೂಡಾ ಉದ್ದೇಶವಾಗಿದೆ. ತೆರೆಯ ಮೇಲಿನ ಛಾಲೆಂಜಿಂಗ್ ನಾಯಕನಟ ದರ್ಶನ್‌ರವರು ತಮ್ಮ ಪತ್ನಿ ವಿಜಯಲಕ್ಷ್ಮಿ ಹಾಗೂ ಮಗುವಿನ ಮೇಲೆ ಮಾರಣಾಂತಿಕ ಹಲ್ಲೆ ನಡೆಸಿ ನೈಜ ಬದುಕಿನ ಛಾಲೆಂಜ್‌ಗಳಲ್ಲಿ ಈಗ ಖಳನಾಯಕನಾಗಿದ್ದಾರೆ. ಸಿನೆಮಾ ಪ್ರಪಂಚ ಇಲ್ಲಿಯವರೆಗೆ ಕಂಡಿರದ ಛಾಲೆಂಜೊಂದನ್ನು ನಿಜ ಜೀವನದಲ್ಲಿ ಮಾಡಿದ ವಿಜಯಲಕ್ಷ್ಮಿ ಸಿನೆಮಾದ ದಿಗ್ಗಜರಿಗೆ ದೊಡ್ಡ ಆಘಾತ ನೀಡಿರುವುದಂತೂ ನಿಜ. ನಾಲ್ಕು ಗೋಡೆಗಳ ನಡುವೆ ನಡೆಯುವ ಕೌಟುಂಬಿಕ ಹಿಂಸೆ ಹಾಗೂ ಕ್ರೌರ್ಯವನ್ನು ಹೇಳಿಕೊಳ್ಳಲಾಗದ ಹಾಗೂ ಸಹಿಸಿಕೊಳ್ಳಲಾಗದ ಘಳಿಗೆಯಲ್ಲಿ ಮಹಿಳೆಯೊಬ್ಬಳು ಮಾಡಬಹುದಾದ ಆಯ್ಕೆಯನ್ನೇ ವಿಜಯಲಕ್ಷ್ಮಿಯವರೂ ಮಾಡಿದ್ದಾರೆ. ಕಾನೂನಿನ ಬಾಗಿಲು ತಟ್ಟಿದ್ದಾರೆ. ತಮ್ಮ ವಾಸ್ತವ ಬದುಕಿನಲ್ಲಿ ದುರಂತ ನಾಯಕಿಯಾಗುವುದನ್ನು ತಪ್ಪಿಸಿಕೊಳ್ಳಲು ಪೊಲೀಸ್ ಠಾಣೆಯ ಮೆಟ್ಟಿಲು ಏರಿದ್ದಾರೆ. ನಮ್ಮ ಸಮಾಜದ ಬಹುಪಾಲು ಮಹಿಳೆಯರು ಎದುರಿಸುತ್ತಿರುವ ಸವಾಲುಗಳಿವು. ತೆರೆಯ ಮೇಲೆ ನೊಂದ ಮಹಿಳೆಯರಿಗೆ ರಕ್ಷಣೆ ನೀಡುವ ನಾಯಕ ನಟ ದರ್ಶನ್ ನಿಜ ಜೀವನದಲ್ಲಿ ವಿಜಯಲಕ್ಷ್ಮಿಯವರ ಬದುಕಿಗೆ ಖಳನಾಯಕನಾಗಿರುವುದು ವ್ಯಂಗ್ಯವೇ ಸರಿ. ಸಿನೆಮಾದಲ್ಲಿನ ಭ್ರಮಾಲೋಕ ಹಾಗೂ ಬದುಕಿನ ವಾಸ್ತವದ ನಡುವಿನ ಕಂದರ ಬಯಲಾಗಿದೆ.

ನಿಜ ಜೀವನದ ದೌರ್ಜನ್ಯದ ಚಿತ್ರಣಕ್ಕೆ ತೆರೆಯ ಮೇಲಿನ ಬಣ್ಣದ ಮೆರುಗು ಹಚ್ಚಲಿಕ್ಕೆ ನೀವು ಪಡುತ್ತಿರುವ ಹರಸಾಹಸಗಳು ನಮ್ಮಲ್ಲಿ ಆತಂಕವನ್ನು ಹುಟ್ಟು ಹಾಕುತ್ತಿವೆ. ದೈಹಿಕ ಹಾಗೂ ಮಾನಸಿಕ ಹಿಂಸೆಯಿಂದ ಬಳಲುತ್ತಿದ್ದ ಸ್ಥಿತಿಯಲ್ಲಿ ವಿಜಯಲಕ್ಷ್ಮಿಯವರ ಮೇಲೆ ತಮ್ಮಲ್ಲಿ ಕೆಲವರು ಹೇರಿದ ರಾಜಿಯ ಒತ್ತಡ ಅತ್ಯಂತ ಅಮಾನವೀಯವಾದುದು. ಗ್ಲಾಮರಸ್ ನಾಯಕ ನಟನ ಗೌರವ, ಘನತೆ, ಖ್ಯಾತಿಗೋಸ್ಕರ ಹೆಣ್ಣನ್ನು ಬಲಿಪಶು ಮಾಡಲು ನಡೆಸಿದ ತಮ್ಮ ಪ್ರಯತ್ನಗಳು ಪುರುಷ ಪ್ರಧಾನ ಮೌಲ್ಯಗಳ ಪ್ರತಿಬಿಂಬವಾಗಿವೆ. ಇಂತಹ ರಕ್ಷಣೆಯ ಹುನ್ನಾರಗಳಿಂದಾಗಿ ತಮ್ಮ ಪ್ರಪಂಚದ ಎಷ್ಟು ಹೆಣ್ಣುಮಕ್ಕಳ ಬದುಕು ನಾಶವಾಗಿದೆ ಎಂಬುದಕ್ಕೆ ವಿಜಯಲಕ್ಷ್ಮಿಯವರು ಒಂದು ಉದಾಹರಣೆ ಮಾತ್ರ. ಸಿನೆಮಾ ಲೋಕದ ಹೆಣ್ಣಿನಮೇಲಿನ ಹಿಂಸೆ ಬೀದಿಗೆ ಬರಬಾರದು ಎಂದು ಹೇಳುವ ಮೂಲಕ ಮಹಿಳೆಯರಿಗೆ ಹಾಗೂ ಸಮಾಜಕ್ಕೆ ಯಾವ ಸಂದೇಶ ನೀಡುತ್ತಿದ್ದೀರಿ ಎಂಬುದರ ಎಚ್ಚರ, ಕಾಳಜಿ ನಿಮಗಿದೆಯೇ? ಯಾರ ರಕ್ಷಣೆಗಾಗಿ ತಾವು ಟೊಂಕಕಟ್ಟಿ ನಿಂತಿದ್ದೀರಿ? ಯಾವುದರ ಪರವಾಗಿದೆ ತಮ್ಮ ವಾದ? ಇಂತಹ ಪುರುಷ ಪ್ರಧಾನ ಹುನ್ನಾರಗಳಿಂದ ಸಿನೆಮಾ ಲೋಕದ ಮಹಿಳೆಯರ ಧ್ವನಿ ಅಡಗಿಸುವ ತಮ್ಮ ನಿಲುವನ್ನು ನಾವು ಖಂಡಿಸುತ್ತೇವೆ.

ನಾಯಕರುಗಳನ್ನು ಆದರ್ಶವೆಂದು ಭ್ರಮಿಸಿ ಸಿನೆಮಾ ನೋಡುತ್ತಿರುವ ಜನರ ದುಡ್ಡಿನಿಂದ ತಮ್ಮ ಚಿತ್ರೋದ್ಯಮ ನಡೆಯುವುದು ಸತ್ಯ. ಭ್ರಮೆಯಿಂದ ಈಚೆ ಬರಲಾಗದ ಅಭಿಮಾನಿಗಳು ಮಾರಣಾಂತಿಕ ಹಲ್ಲೆಯನ್ನೂ ಅನೇಕ ರೀತಿಗಳಿಂದ ಕ್ಷಮಾರ್ಹವಾಗಿಸಲು ಪ್ರಯತ್ನಿಸುತ್ತಿದ್ದಾರೆ.

ಅವರ ಮುಗ್ಧತೆ, ಹುಂಬತನಗಳ ಅರಿವು ನಿಮಗೂ ಇದೆ. ಇಂತಹ ಸಂದರ್ಭದಲ್ಲಿ ತಾವು ಜವಾಬ್ದಾರಿಯಿಂದ ವರ್ತಿಸಬೇಕಾಗುತ್ತದೆ. ಆದರೆ ಹೂಡಿರುವ ಬಂಡವಾಳವನ್ನೇ ಗುರಿ ಮಾಡಿಕೊಂಡು ನಾಯಕನ ರಕ್ಷಣೆಗೆ ಮುಂದಾಗಿದ್ದೀರಿ. ಸಿನೆಮಾದಲ್ಲಿ ಸರಳೀಕರಿಸಿ ಉತ್ತರ ನೀಡುವ ಹಾಗೆ ಆತನ ನಾಯಕಿ ಪಾತ್ರದ ಕಲಾವಿದೆ ನಿಖಿತಾರವರಿಗೆ ನಿಷೇಧ ಹೇರಿ ನಿಮ್ಮ ಹುಂಬತನವನ್ನು ಮೆರೆದಿದ್ದೀರಿ. ಈಗ ನೀವು ಒತ್ತಡಕ್ಕೆ ಮಣಿದು ನಿಷೇಧ ವಾಪಸ್ ಪಡೆದಿದ್ದೀರಿ ನಿಜ, ಆದರೆ ಇಬ್ಬರು ಮಹಿಳೆಯರಿಗೇ ಶಿಕ್ಷೆ ನೀಡಿ ನಾಯಕನನ್ನು ರಕ್ಷಿಸಲು ತೋರಿಸಿದ ನಿಮ್ಮ ಜಾಣಾಕ್ಷತನವನ್ನು ನಾವು ವಿರೋಧಿಸುತ್ತೇವೆ. ಪುರುಷ ಪ್ರಧಾನ ಮೌಲ್ಯಗಳ ಜೊತೆ ತಳಕು ಹಾಕಿಕೊಳ್ಳುವ ಬಂಡವಾಳ, ಮಹಿಳೆಯರನ್ನೇ ಹೇಗೆ ತಮ್ಮ ಬಲಿಪಶು ಮಾಡಿಕೊಳ್ಳಬಲ್ಲದು ಎಂಬುದನ್ನು ನೀವು ನಿಮ್ಮ ನಿಲುವುಗಳ ಮೂಲಕ ತೋರಿಸಿದ್ದೀರಿ. ಮಹಿಳೆಯರ ವ್ಯಕ್ತಿತ್ವಗಳನ್ನು ನಾಶಮಾಡುವ ಇಂತಹ ನಿಲುವುಗಳನ್ನು ನಾವು ಖಂಡಿಸುತ್ತೇವೆ. ಕಲಾ ಪ್ರಪಂಚದ ಆರಾಧಕರಾದ ನೀವು ಜೀವನ್ಮುಖಿಯಾದ ಮೌಲ್ಯಗಳ ಬಗ್ಗೆ ಚಿಂತನೆ ನಡೆಸುವಂತಾಗಲಿ ಎಂದು ನಾವು ಆಶಿಸುತ್ತೇವೆ.

ಜೈಲು ವಾಸ ತಪ್ಪಿಸಿ ನಾಯಕನ ಇಮೇಜು ಉಳಿಸಲು ನಾಯಕನಾದಿಯಾಗಿ ತಾವೆಲ್ಲರೂ ತೋರಿಸುತ್ತಿರುವ 'ಆಸ್ಪತ್ರೆಯ ರೋಗಿ' ಸಿನೆಮಾ ಮಜಬೂತಾಗಿದೆ. ಎರಡು ದಿನ ಅಸ್ತಮ, ಹದಿನೈದು ದಿನ ಜಾಂಡೀಸ್, ಹತ್ತು ದಿನ ಮಾನಸಿಕ ಖಿನ್ನತೆ – ಬೇಲ್ ಸಿಗುವುದು ಮುಂದೆ ಹೋದರೆ ಇನ್ನು ಯಾವ ಕಾಯಿಲೆಗಳು ಬರಬಹುದೆಂಬುದನ್ನು ಈಗಾಗಲೇ ಜನ ಲೆಕ್ಕ ಹಾಕುತ್ತಿದ್ದಾರೆ. ನಿಮ್ಮೆಲ್ಲರ ಜಾಣತನಕ್ಕೆ ಶಾಮೀಲ್ ಆಗಿರುವ ವೈದ್ಯರ ತಂತ್ರಗಾರಿಕೆಯನ್ನೂ ನಾವು ವಿರೋಧಿಸುತ್ತೇವೆ. ಕಾನೂನು ಬಲವಾಗಿರುವ ಈ ಸಮಯದಲ್ಲಿ ದರ್ಶನ್ ಜೈಲು ಸೇರಿದ್ದಾರೆ. ಆದಾಗ್ಯೂ ನಾಯಕನ ತಪ್ಪನ್ನು ಸಮರ್ಥಿಸಲು ಸಮೀಕ್ಷೆ ನಡೆಸುವ ಮಾಧ್ಯಮದವರ ನಿಲುವುಗಳನ್ನೂ ನಾವು ಖಂಡಿಸುತ್ತೇವೆ.

ಕಾಲ ಬದಲಾಗುತ್ತಿದೆ, ಕುಟುಂಬದ ಚಿತ್ರಣ ಬದಲಾಗುತ್ತಿದೆ. ಹೆಚ್ಚಾಗುತ್ತಿರುವ ಕೌಟುಂಬಿಕ ಹಿಂಸೆ ತಡೆಯಲಾರದೇ ಮಾತನಾಡುವ, ಧ್ವನಿ ಎತ್ತುವ ಮಹಿಳೆಯರ ಸಂಖ್ಯೆಯೂ ಹೆಚ್ಚಾಗುತ್ತಿದೆ. ಸಿನೆಮಾ ಪ್ರಪಂಚದ ಮಹಿಳೆಯರು ಇದರಿಂದ ಹೊರತಾಗಿರುವುದಿಲ್ಲ. ನ್ಯಾಯ, ಕಾನೂನಿಗೆ ನೀವು ಮೀರಿದವರಲ್ಲ. ಯಾರೇ ನಡೆಸಿದರೂ ಅದು ಕೌಟುಂಬಿಕ ದೌರ್ಜನ್ಯವೇ. ಅಪರಾಧಿಗಳು ಅಪರಾಧಿಗಳೇ. ನ್ಯಾಯ ಸಿನೆಮಾದವರಿಗೆ, ಸಾಮಾನ್ಯ ಜನರಿಗೆ ಬೇರೆ ಬೇರೆಯಾಗಿರುವುದಿಲ್ಲ. ನೀವು ಹೆಣ್ಣಿನ ಮೇಲಿನ ಕೌಟುಂಬಿಕ ಹಿಂಸೆಯನ್ನು ಮುಚ್ಚಿಡಲು, ಸಾಮಾನ್ಯೀಕರಿಸಲು ಪ್ರಯತ್ನ ಪಟ್ಟು ಮಹಿಳಾಲೋಕಕ್ಕೆ ಅಗೌರವ ತೋರಿಸಿದ್ದೀರಿ. ನಿಮಗೆ ನೀವೇ ಅಗೌರವ ತೋರಿಸಿಕೊಂಡಿದ್ದೀರಿ. ಜೊತೆಗೆ ಹೆಣ್ಣಿನ ಮೇಲೆ ನಡೆಯುತ್ತಿರುವ ಅವ್ಯಾಹತ ಹಿಂಸೆಗೆ ಪರೋಕ್ಷವಾಗಿ ನಿಮ್ಮ ಬೆಂಬಲವನ್ನೂ ನೀಡುತ್ತಿದ್ದೀರಿ. ಹೀಗೇ ಮುಂದುವರಿದಲ್ಲಿ ನಾವು ಮಹಿಳೆಯರು ಕೆಲವರ ಸಿನೆಮಾಗಳನ್ನು ನೋಡುವುದೇ ಇಲ್ಲವೆಂದು ಬಹಿಷ್ಕಾರ ಹಾಕಬೇಕಾಗುತ್ತದೆ. ವಾಸ್ತವದಲ್ಲಿ ಹೆಣ್ಣನ್ನು ದುರಂತ ನಾಯಕಿಯಾಗಿಯೇ ಉಳಿಸುವ ತಮ್ಮ ಎಲ್ಲಾ ಪ್ರಯತ್ನಗಳನ್ನು ಈ ಮೂಲಕ ನಾವು ವಿರೋಧಿಸುತ್ತಲೇ ಈ ಕೆಳಕಂಡ ಎರಡು ಮನವಿಗಳನ್ನು ತಮ್ಮ ಮುಂದೆ ಇಡುತ್ತಿದ್ದೇವೆ.

1 **ನಟ ದರ್ಶನ್‌ರವರು ತಮ್ಮ ತಪ್ಪಿನ ಹೊಣೆಯನ್ನು ತಾವೇ ಹೊತ್ತು ಬಹಿರಂಗವಾಗಿ ಕ್ಷಮೆ ಕೇಳಬೇಕು. ತಮ್ಮನ್ನು ಹುಂಬತನದಿಂದ ಸಮರ್ಥಿಸುವುದನ್ನಾಗಲೀ, ಅಥವಾ ಅನುಕರಿಸುವು ದನ್ನಾಗಲೀ ಮಾಡಬಾರದೆಂದು ತಮ್ಮ ಅಭಿಮಾನಿಗಳಿಗೆ ಮನವಿ ಮಾಡಬೇಕು. ಆತ್ಮ ವಿಮರ್ಶೆ ಮಾಡಿಕೊಂಡು ಘನತೆಯಿಂದ ಶಿಕ್ಷೆಯನ್ನು ಸ್ವಾಗತಿಸಬೇಕು. ಈ ಮೂಲಕ ಆತ ನಿಜವಾದ ಅರ್ಥದಲ್ಲಿ ನಾಯಕನಾಗುವಂತೆ ಪ್ರೇರೇಪಿಸುವುದು ನಿಮ್ಮ ಜವಾಬ್ದಾರಿಯಾಗಿದೆ. ಇಂತಹ ನಿಲುವನ್ನು ನಾವು ಮನಃ ಪೂರ್ವಕವಾಗಿ ಸ್ವಾಗತಿಸುತ್ತೇವೆ.**

2 ಸಿನೆಮಾರಂಗದ ಒಳಗೆ ಹೆಣ್ಣಿನಮೇಲೆ ನಡೆಯುವ ಕೌಟುಂಬಿಕ ಅಥವಾ ವೃತ್ತಿಯಲ್ಲಿನ ಹಿಂಸೆಗಳನ್ನು ನಿಯಂತ್ರಿಸಲು, ಹಿರಿಯ ಕಲಾವಿದರು, ಪ್ರಗತಿಪರ ಹಾಗೂ ಮಹಿಳಾಪರ ಚಿಂತಕ/ಸಂಘಟನೆಗಳನ್ನು ಒಳಗೊಂಡ, ಸಿನೆಮಾ ಮಹಿಳೆಯರ ಮಂಡಳಿ ಅಥವಾ ಸಂಘದ ರಚನೆಗೆ ನಾವು ಒತ್ತಾಯಿಸುತ್ತೇವೆ. ಹಿರಿಯ ಕಲಾವಿದೆಯರು ಹಾಗೂ ಮಹಿಳಾ ಸಂಘಟಕರು ಇದರಲ್ಲಿ ಮುಖ್ಯ ಕಾರ್ಯ ನಿರ್ವಾಹಕರಾಗಿ ಕೆಲಸ ನಿರ್ವಹಿಸಬೇಕು. ಈ ವೇದಿಕೆ ತಮ್ಮ ಕ್ಷೇತ್ರದ ಮಹಿಳೆಯರಿಗೆ ಮುಖವಾಣಿ ಯಾಗಬೇಕು ಎಂದು ನಾವು ಆಶಿಸುತ್ತೇವೆ. ಈ ನಿಟ್ಟಿನಲ್ಲಿ ಆದಷ್ಟು ಬೇಗನೆ ಕ್ರಮ ಕೈಗೊಂಡು, ನಮ್ಮೊಂದಿಗೆ ಸಂವಾದ ನಡೆಸಲು ಕೋರುತ್ತೇವೆ.

(ಬೆಂಗಳೂರಿನ ಮಹಿಳಾ ಸಂಘಟನೆಗಳು ಹಾಗೂ ಇತರ ಮಾನವ ಹಕ್ಕುಗಳ ಸಂಘಟನೆಗಳು ಸಿನೆಮ ಬಾಂಧವರಿಗೆ ಬರೆದ ಬಹಿರಂಗ ಪತ್ರವನ್ನು ಸಂಪಾದಕೀಯಕ್ಕೆ ಬಳಸಿಕೊಳ್ಳಲಾಗಿದೆ.)

ಒಳಗಿನ ಪುಟಗಳಲ್ಲಿ....



**ಓದುಗರಲ್ಲಿ ಮನವಿ**

**ಜಾಗತೀಕರಣದ ಇಂದಿನ ಸಂದರ್ಭದಲ್ಲಿ 'ನಮ್ಮ ಮಾನಸ'ದಂತಹ ಸಣ್ಣ ಪತ್ರಿಕೆಗೆ ಓದುಗರೇ ಜೀವಾಳ. ಪತ್ರಿಕೆಗೆ ಚಂದಾದಾರರಾಗುವ ಮೂಲಕ ಹಾಗೂ ಈ ವರ್ಷದ ಚಂದಾ ನವೀಕರಿಸುವ ಮೂಲಕ ಪತ್ರಿಕೆಯ ಪ್ರಕಟಣೆಗೆ ಸಹಕಾರ ನೀಡಿ.**



# ಮಹಿಳೆ, ಜನಾಂಗ ಮತ್ತು ವರ್ಗ' ಜನನ ನಿಯಂತ್ರಣದ ಹಕ್ಕು

■ಡಾ. ಎಚ್.ಎಸ್.ಅನುಪಮಾ

ಅಮೆರಿಕದ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದಲ್ಲಿ ಎಮರಿಟಸ್ ಪ್ರೊಫೆಸರ್ ಆಗಿರುವ ಏಂಜೆಲಾ ಡೇವಿಸ್ ಸ್ತ್ರೀವಾದಿ ಚಿಂತಕಿ ಹಾಗೂ ಮಾನವ ಹಕ್ಕು ಹೋರಾಟಗಾರ್ತಿ. ವರ್ಗ ಶೋಷಣೆಯಲ್ಲಿ ಲಿಂಗ ಮತ್ತು ಜನಾಂಗ ತಾರತಮ್ಯ ಎರಡೂ ಪ್ರಬಲ ಸುಳಿಗಳಾಗಿ ಕೆಲಸ ಮಾಡುವುದನ್ನು ತಮ್ಮ 'ವುಮನ್, ರೇಸ್ ಅಂಡ್ ಕ್ಲಾಸ್' ಪುಸ್ತಕದಲ್ಲಿ ವಿಸ್ತೃತವಾಗಿ ಚರ್ಚಿಸಿದ್ದಾರೆ. ಪುರುಷ ಪ್ರಧಾನ ಆರ್ಥಿಕ ವ್ಯವಸ್ಥೆಯ ಏಕಸ್ವಾಮ್ಯವನ್ನು ಮುರಿಯದೇ ಲಿಂಗ – ಜನಾಂಗ – ವರ್ಗ ತಾರತಮ್ಯಗಳನ್ನು ನಾಶ ಮಾಡಲಾಗದು ಎಂದು ಪ್ರತಿಪಾದಿಸುತ್ತಾರೆ.

ಗುಲಾಮಗಿರಿಯ ಆರಂಭದಿಂದ ಇಂದಿನ ತನಕ ಜೀವಂತವಿರುವ ಜನಾಂಗ ತಾರತಮ್ಯವನ್ನು ಮಹಿಳಾ ದೃಷ್ಟಿಕೋನದಲ್ಲಿ ವಿಶ್ಲೇಷಿಸಿರುವ ಅವರು, ಗುಲಾಮಗಿರಿಯ ಬದಲಾದ ಅವತಾರವನ್ನೂ, ಜನಾಂಗ ಶೋಷಣೆಯ ಹಲವು ಮಜಲುಗಳನ್ನೂ, ಮಹಿಳಾ ಮತ್ತು ಮಾನವ ಹಕ್ಕುಗಳ ಹೋರಾಟ ನಡೆದುಬಂದ ದಾರಿಯನ್ನೂ ಗುರುತಿಸುತ್ತಾರೆ. ಗುಲಾಮಗಿರಿಯ ಎಲ್ಲ ಸಂಕಷ್ಟಗಳನ್ನು ಅಥೆಂಟಿಕ್ ಆಗಿ ದಾಖಲಿಸುವ ಈ ಪುಸ್ತಕದ ಅಧ್ಯಾಯಗಳ ಹೆಸರುಗಳೇ ಅದು ಒಳಗೊಂಡಿರುವ ವಿಷಯ, ವಿಸ್ತಾರ ಹಾಗೂ ಆಯಾಮಗಳ ಕುರಿತು ಒಂದು ಸೂಚಿಯನ್ನೊದಗಿಸುತ್ತದೆ. ಅವರು ನಿರ್ವಹಿಸಿರುವ ವಿಷಯಗಳು ಹೀಗಿವೆ:

- ಗುಲಾಮಗಿರಿಯ ನ್ಯಾಯಬದ್ಧತೆ – ಹೆಣ್ತನದ ಹೊಸ ವ್ಯಾಖ್ಯೆಯ ಮಾನದಂಡಗಳು
- ಗುಲಾಮಗಿರಿ ವಿರೋಧಿ ಚಳವಳಿ ಮತ್ತು ಮಹಿಳಾ ಹಕ್ಕು ಹೋರಾಟದ ಆರಂಭ
- ಆರಂಭಿಕ ಮಹಿಳಾ ಚಳವಳಿಯಲ್ಲಿ ವರ್ಗ ಮತ್ತು ಜನಾಂಗದ ಪಾತ್ರ
- ಸಮಾನ ವೇತನ ಹೋರಾಟ ಮತ್ತು ಜನಾಂಗ ತಾರತಮ್ಯ
- ಕಪ್ಪು ಮಹಿಳೆಯ ದೃಷ್ಟಿಯಲ್ಲಿ ವಿಮೋಚನೆ
- ಶಿಕ್ಷಣ ಮತ್ತು ಬಿಡುಗಡೆ: ಕಪ್ಪು ಮಹಿಳೆಯ ದೃಷ್ಟಿಕೋನ
- ಕಮ್ಯುನಿಸ್ಟ್ ಮಹಿಳೆಯರು
- ಜನಾಂಗ ತಾರತಮ್ಯ, ಕುಟುಂಬ ಯೋಜನೆ ಮತ್ತು ಸಂತಾನೋತ್ಪತ್ತಿ ಹಕ್ಕು ಇತ್ಯಾದಿ..

**'ಕಾಲು ಒದ್ದೆಯಾಗದೆ ಸಮುದ್ರವನ್ನಾದರೂ ದಾಟಬಹುದು; ಆದರೆ ಕಣ್ಣು ಒದ್ದೆಯಾಗದೇ ಜೀವನ ಸಮುದ್ರವನ್ನು ದಾಟಲಾಗದು'** ಎಂಬ ಮಾತು ಗುಲಾಮ ಹೆಣ್ಣುಮಕ್ಕಳಿಗೆ ಅಕ್ಷರಶಃ ಅನ್ವಯಿಸುತ್ತದೆ. ಭಾರತದ ದಲಿತ ಮಹಿಳೆಯರಿಗಿಂತ ಹೆಚ್ಚು ಶೋಷಣೆಗೊಳಗಾದ ಗುಲಾಮಿ ಮಹಿಳೆಯರು ಸಹಿಸಲಸಾಧ್ಯ ದೈಹಿಕ, ಮಾನಸಿಕ, ಲೈಂಗಿಕ ಶೋಷಣೆಯ ನಡುವೆಯೂ ತಮ್ಮ ನೆಲಮೂಲದ ಸಂಸ್ಕೃತಿಯ ಕುರುಹನ್ನಾಗಲೀ, ಜೀವನ ಪ್ರೀತಿಯನ್ನಾಗಲೀ, ಹೋರಾಟದ ಕೆಚ್ಚನ್ನಾಗಲೀ ಬಿಡದೇ ಬದುಕುವ ಹಂಬಲ ಹೊತ್ತು ಉಸಿರಾಡಿದವರು. ತಮ್ಮ ನೆಲೆಯಿಂದ ಮತ್ತಾವುದೋ ನೆಲಕ್ಕೆ ಪ್ರಾಣಿಗಳಂತೆ ಸಾಗಿಸಲ್ಪಟ್ಟರೂ ಇಂದಲ್ಲ ನಾಳೆ ಬಿಡುಗಡೆ ದೊರಕೀತೆಂಬ ಕೆಚ್ಚಿನಿಂದ 'ಉತ್ತರ ನಕ್ಷತ್ರ'ದ ಗುರುತಿಟ್ಟುಕೊಂಡು ಕಗ್ಗತ್ತಲ ಹಾದಿ ಸವೆಸಿದವರು. ಖಂಡಾಂತರ ದೂರವಿರುವ ಸೋದರಿಯರು ಮನುಷ್ಯ ಬದುಕಲಸಾಧ್ಯ ಸನ್ನಿವೇಶದಲ್ಲಿ ಕುಟುಂಬವನ್ನು ಸಾಗಿಸಲು ಪಟ್ಟ ಕಷ್ಟ ಹಾಗೂ ಅವರ ಬಿಡುಗಡೆಯ ಹೋರಾಟ ನಮ್ಮಲ್ಲಿ ಸಾವಿರಾರು ವರ್ಷಗಳಿಂದ ಕಡೆಗಣಿಸಲ್ಪಟ್ಟ ಮಹಿಳಾ ಸಮೂಹಕ್ಕೆ ಸ್ಫೂರ್ತಿಯ ಬೆಳಕಾಗಬಹುದು.

ಹೀಗೆ ಗುಲಾಮಗಿರಿ, ಜನಾಂಗ ತಾರತಮ್ಯ, ಜನನ ನಿಯಂತ್ರಣ ಹಾಗೂ ಸಂತಾನೋತ್ಪತ್ತಿ ಹಕ್ಕು ಕುರಿತು ಚರ್ಚಿಸಲಾದ ಸಂಗತಿಗಳು, ಸಾಮಾಜಿಕ ಅಸಮಾನತೆ ಹಾಗೂ ಜನಸಂಖ್ಯಾ ಸ್ಫೋಟದಿಂದ ತತ್ತರಿಸಿರುವ ನಮ್ಮ ದೇಶಕ್ಕೂ ಪ್ರಸ್ತುತವಾಗುತ್ತವೆ. ಆ ಕಾರಣದಿಂದ ಒಂದೆರೆಡು ಅಧ್ಯಾಯಗಳ ಆಯ್ದ ಭಾಗಗಳನ್ನು ಸಂಗ್ರಹಿಸಿ ನೀಡಲಾಗಿದೆ.

* * *

1850ರಲ್ಲಿ ಸಾರಾ ಗ್ರಿಮ್ಕೆ ಬರೆದಂತೆ: 'ಗಂಡ ಮತ್ತು ಹೆಂಡತಿ ಒಬ್ಬರನಂತರ ಒಬ್ಬರು ಹೆರುವುದಾಗಿದ್ದರೆ ಯಾವ ಕುಟುಂಬವೂ ಮೂರಕ್ಕಿಂತ ಹೆಚ್ಚು ಮಕ್ಕಳನ್ನು ಹೊಂದುತ್ತಿರಲಿಲ್ಲ.' ಎಂದರೆ, ಹೆರುವುದು ಮತ್ತು ಮಕ್ಕಳ ಜವಾಬ್ದಾರಿ ದಂಪತಿಗಳಲ್ಲಿ ಸಮಾನವಾಗಿ ಹಂಚಲ್ಪಟ್ಟಿದ್ದರೆ ಗಂಡಿಗೆ ಅದರ ಕಷ್ಟ ಗೊತ್ತಾಗುತ್ತಿತ್ತು ಎಂದ ಹಾಗಾಯಿತು. ಆದರೆ ಮಕ್ಕಳ ನಿರ್ವಹಣೆ ಮಹಿಳೆಯ ಜೈವಿಕ ಕರ್ತವ್ಯ. ಆದ್ದರಿಂದ ಯಾವಾಗ,

ಎಷ್ಟು ಮಕ್ಕಳು ಬೇಕೆಂದು ನಿರ್ಧರಿಸುವ ಹಕ್ಕನ್ನು ಅವಳಿಗೇ ಕೊಡಬೇಕೆನ್ನುವುದು ಆರಂಭಿಕ ಮಹಿಳಾ ಹೋರಾಟಗಾರರ ಒತ್ತಾಯ ವಾಗಿತ್ತು. ಕುಟುಂಬ ಯೋಜನೆ ಮತ್ತು ಜನನ ನಿಯಂತ್ರಣ ಇವೆರಡೂ ಮಹಿಳೆಗೆ ಬಿಡುಗಡೆಯ ಹಾದಿಯ ಮೊದಲ ಮೆಟ್ಟಿಲುಗಳು ಎಂದೇ ಭಾವಿಸಲಾಗಿತ್ತು.

ಗುಲಾಮಗಿರಿ ನಿಷೇಧಿಸಿದ್ದರೂ, ವಿಜ್ಞಾನ ತಂತ್ರಜ್ಞಾನದಲ್ಲಿ ಉನ್ನತಿ ಸಾಧಿಸಿದ್ದರೂ, ಮಾನವ ಹಕ್ಕು ಜಾಗೃತಿ ಮೂಡಿದ್ದರೂ ಜನನ ನಿಯಂತ್ರಣದ ಮಟ್ಟಿಗೆ ಅತಿ ಪುರಾತನ ಸನಾತನ ಧೋರಣೆ ಅಮೆರಿಕ ಸಮಾಜದ್ದು. ಅಮೆರಿಕದ ಹೆಣ್ಣುಮಕ್ಕಳು ಪ್ರಪಂಚದ ಉಳಿದ ಭಾಗಗಳ ಹೆಂಗಸರಂತೆ ಹೆರುವ ಯಂತ್ರಗಳಾಗಿದ್ದರು. 19ನೇ ಶತಮಾನದಲ್ಲಿ 'ಐಚ್ಛಿಕ ತಾಯ್ತನ' ಕುರಿತು ಮಹಿಳಾ ಪರ ಚಳವಳಿ ದನಿಯೆತ್ತಿದಾಗ ಅದೊಂದು ಅತಿರೇಕವೆಂಬಂತೆ ಬಿಂಬಿಸಲ್ಪಟ್ಟಿತು. ಐಚ್ಛಿಕ ತಾಯ್ತನ ವೆಂದರೆ ಗಂಡನ ಲೈಂಗಿಕ ಬಯಕೆಗಳನ್ನು ತೃಪ್ತಿಗೊಳಿಸಲು ನಿರಾಕರಣೆ ಎಂದೇ ಭಾವಿಸಲಾಗಿತ್ತು. ಹೆಚ್ಚೂ ಕಡಿಮೆ ಒಂದು ಶತಮಾನದ ನಂತರ ಸುಲಭವಾಗಿ ಮತ್ತು ಕಾನೂನುಬದ್ಧವಾಗಿ ಗರ್ಭಪಾತ ಮಾಡಿಸಿಕೊಳ್ಳುವ ಅವಕಾಶ ನೀಡಲಾಯಿತು.

ಕರಿಯ ಮಹಿಳೆಯರು ಹೆಚ್ಚು ಗರ್ಭಪಾತಕ್ಕೊಳಗಾಗುತ್ತಿದ್ದರು. ಹೆಚ್ಚು ಶಿಶುಮರಣಗಳು ಸಂಭವಿಸುತ್ತಿದ್ದವು. ಆಫ್ರಿಕಾದ ಬ್ಲ್ಯಾಕ್ ಮ್ಯಾಜಿಕ್ ಅಥವಾ ಯಾವುದೋ ರಹಸ್ಯ ಔಷಧಿ ಈ ಕರಿಯರಿಗೆ ತಿಳಿದಿದೆ ಎಂದೇ ಬಿಳಿಯರು ಭಾವಿಸಿದ್ದರು. ಗರ್ಭಪಾತ–ಶಿಶುಮರಣ ಉದ್ದೇಶ ಪೂರ್ವಕವಾಗಿದ್ದರೂ ಅದಕ್ಕೆ ಕಾರಣ ಬೇರೆಯೇ ಇದೆ. ಕೊನೆಯಿಲ್ಲದ ಶ್ರಮದ, ಅವಮಾನದ ದುಡಿಮೆಯ ಕೆಲಸ ಮಾಡಲು ಮಕ್ಕಳನ್ನು ಏಕೆ ಭೂಮಿ ಮೇಲೆ ತರಬೇಕೆನ್ನುವುದು ಹೆಚ್ಚಿನವರ ಅಭಿಪ್ರಾಯವಾಗಿತ್ತು. ಮಕ್ಕಳೇ ಇಲ್ಲದ ಗುಲಾಮಿ ಮಹಿಳೆಯರಿದ್ದರು. ಮಾರ್ಗರೆಟ್ ಗಾರ್ನರ್ ಎಂಬಾಕೆ ಎಳೆಯ ಮಗಳೊಂದಿಗೆ ತಪ್ಪಿಸಿಕೊಂಡು ಓಡುತ್ತಾ ಸ್ಲೇವ್ ಕ್ಯಾಚರ್ಸ್ ಕೈಗೆ ಸಿಕ್ಕಿಬಿದ್ದಾಗ, ತನ್ನ ಮಗಳನ್ನು ಕೊಂದು ಹಾಕಿದಳು. ಅದರ ಬಗ್ಗೆ ಏನೂ ಬೇಸರವಿಲ್ಲದೆ, 'ನನ್ನ ಮಗಳು ಎಂದಿಗೂ ಗುಲಾಮ ಹೆಣ್ಣಾಗಿ ನೋವನುಭವಿಸುತ್ತ ಬಾಳಬೇಕಿಲ್ಲ ಎಂದು ನನಗಂತೂ ಖುಷಿಯಾಗಿದೆ. ನನಗೆ ಘನಘೋರ ಶಿಕ್ಷೆಯನ್ನೇ ನೀಡಿ. ಗಲ್ಲುಗಂಬಕ್ಕೆ ಹಾಡಾಡುತ್ತ ಬೇಕಾದರೂ ಹೋಗುತ್ತೇನೆ, ಆದರೆ ಬಿಡುಗಡೆ ಮಾಡಿ ಮತ್ತೆ ಗುಲಾಮಳಾಗಿ ದಯವಿಟ್ಟು ಕಳಿಸಬೇಡಿ' ಎಂದು ಅಂಗಲಾಚುತ್ತಾಳೆ. ಇದು ಗುಲಾಮರಾಗಿ ಕರಿಯ ಹೆಣ್ಣುಮಕ್ಕಳು ಅನುಭವಿಸಿದ ನೋವು, ಹತಾಶೆಯನ್ನು ಎತ್ತಿ ತೋರಿಸುತ್ತದೆ.

ಮಹಿಳೆಯ ಜನನ ನಿಯಂತ್ರಣದ ಬಯಕೆ ಹೊಸದಲ್ಲ. 1844ರ ಅಮೆರಿಕದ ಪ್ರಾಕ್ಟಿಕಲ್ ರಿಸಿಪಿ ಬುಕ್‌ನಲ್ಲಿ ಗರ್ಭನಿರೋಧಕ ಲೋಷನ್‌ಗಳ ಬಗೆಗೆ ಸೂಚಿಸಲಾಗಿತ್ತು. ಉದಾ: **ಹನ್ನಾ ಲೋಷನ್:** ಒಂದು ಭಾಗ ಪರ್ಲ್ ಆಶ್ + 6 ಭಾಗ ನೀರು ಮಿಶ್ರ ಮಾಡಿ, ಸೋಸಿ, ಬಾಟಲಿಯಲ್ಲಿ ಮುಚ್ಚಿಟ್ಟುಕೊಂಡಿರಿ. 'ಕನೆಕ್ಷನ್' ಆದ ನಂತರ ಸೋಪಿನ ಜೊತೆ ಅಥವಾ ಬರೀ ಲೋಷನ್ನಿನಲ್ಲಿ ತೊಳೆಯಿರಿ.

**ಅಬರ್ನೆತಿ ಲೋಷನ್:** 'ಪಾದರಸದ ಬೈಕ್ಲೋರೈಡ್ 25 ಭಾಗ + ಬಾದಾಮಿ ಹಾಲು 400 ಭಾಗ + ಆಲ್ಕೋಹಾಲ್ 100 ಭಾಗ + ರೋಸ್ ವಾಟರ್ 1000 ಭಾಗ. ಆ 'ಅಂಗ'ಗಳನ್ನು ಇದರಲ್ಲಿ ಮುಳುಗಿಸಿರಿ. ಕೂಡಲೇ ಬಳಸಿದರೆ ಫಲಿತಾಂಶ ಗ್ಯಾರಂಟಿ.'

ಮಹಿಳೆಯ ಅಗತ್ಯವೇನೇ ಇರಲಿ, ಆಗ ಸುರಕ್ಷಿತ ಗರ್ಭಪಾತ ವಿಧಾನಗಳು ಲಭ್ಯವಿರಲಿಲ್ಲ ಹಾಗೂ ಗರ್ಭಪಾತ ಕಾನೂನಿನ ಪ್ರಕಾರ ಅಪರಾಧವಾಗಿತ್ತು. ನರ್ಸ್ ಆಗಿ ಜನರ ನಡುವೆ ಕೆಲಸ ಮಾಡಿದ ಮಾರ್ಗರೆಟ್ ಹಿಗ್ಗಿನ್ಸ್ ಸ್ಯಾಂಗರ್ಸ್ ಈ ಕಷ್ಟ ಅರಿತಿದ್ದವಳು. ಮಹಿಳೆಯರ ಹೆರಿಗೆ–ಬಸುರಿನ ಕುರಿತಾದ ಸಂಕಷ್ಟವನ್ನು ನೋಡಿದ ಅವಳು, 'ವಾಟ್ ಎವ್ವೆರಿ ಮದರ್ ಶುಡ್ ನೊ', 'ವಾಟ್ ಎವ್ವೆರಿ ಗರ್ಲ್ ಶುಡ್ ನೊ' ಮುಂತಾದ ಕೃತಿಗಳನ್ನು ಬರೆದಳು. ಆಕೆ ಜನನ ನಿಯಂತ್ರಣ ವಿಧಾನಗಳು ಸುಲಭವಾಗಿ, ಕಾನೂನುಬದ್ಧವಾಗಿ ಲಭ್ಯವಾಗಲು ಜನನ ನಿಯಂತ್ರಣ ಹಕ್ಕಿಗಾಗಿ ಹೋರಾಡಿದವಳು. ಅದಕ್ಕೆ ಕಾರಣವಾದ ಘಟನೆಯೊಂದರ ಬಗ್ಗೆ ಸ್ಯಾಂಗರ್ಸ್ ಹೀಗೆ ಬರೆದುಕೊಂಡಿದ್ದಾಳೆ.

ನ್ಯೂಯಾರ್ಕ್‌ನ ಹೊರಭಾಗದ ಒಂದು ಆರೋಗ್ಯ ಶಿಬಿರದಲ್ಲಿ 28 ವರ್ಷದ ಸ್ಯಾಡಿ ಸ್ಯಾಕ್ಸ್ ಎಂಬ ಮಹಿಳೆ ತನಗೆ ಮಕ್ಕಳನ್ನು ಹೆತ್ತು ಹೆತ್ತು ಸಾಕಾಗಿ ಈಗಷ್ಟೇ ಮೂರುತಿಂಗಳ ಬಸುರನ್ನು ಗರ್ಭಪಾತ ಮಾಡಿಕೊಂಡಿದ್ದಾಗಿಯೂ, ಗ್ಯಾರಂಟಿ ಫಲಿತಾಂಶವಿರುವ ಜನನ ನಿಯಂತ್ರಣವೊಂದರ ಬಗ್ಗೆ ತಿಳಿಸಬೇಕೆಂದೂ, ಅದನ್ನು ತಾನು ಗುಟ್ಟಾಗಿಯೇ ಇಟ್ಟಿರುವುದಾಗಿಯೂ ಅಲವತ್ತುಕೊಂಡಳು. ಅದಕ್ಕೆ ವೈದ್ಯರು ನಸುನಗುತ್ತ, 'ಹಾಗಾದರೆ ನಿನ್ನ ಗಂಡನನ್ನು ಮನೆ ಛಾವಣಿಯ ಮೇಲೆ ಮಲಗಲು ಹೇಳು. ಅದು ಗ್ಯಾರಂಟಿ ಗರ್ಭನಿರೋಧಕ' ಎಂದು ಹೇಳಿ ಕಳಿಸಿಬಿಟ್ಟರು. ಕಣ್ಣೀರು ತುಂಬಿಕೊಂಡು ಹೊರಬಂದ ಆಕೆ ಶಿಬಿರದ ನರ್ಸ್ ಮಾರ್ಗರೆಟ್ ಬಳಿ ಗರ್ಭನಿರೋಧಕದ ಬಗ್ಗೆ ಮಾಹಿತಿ ಕೇಳಿದಳು. ಅಂಥ ವಿಧಾನಗಳು ಚಾಲ್ತಿಯಲ್ಲಿರಲಿಲ್ಲ. ಅಷ್ಟೇ ಅಲ್ಲ, ಐಚ್ಛಿಕ ತಾಯ್ತನವೆಂದರೆ ಲೈಂಗಿಕ ಬಯಕೆಯಿಂದ ಮುಕ್ತವಾಗಿರುವುದೆಂದೇ ಭಾವಿಸಲಾಗಿತ್ತು. ಕೆಲ ತಿಂಗಳುಗಳಲ್ಲೇ ಮತ್ತೊಂದು ಗರ್ಭಪಾತದ ವೇಳೆ ಸ್ಯಾಡಿ ಸತ್ತು ಹೋದಳು. ಅವಳ ಸಾವು, ಹತಾಶೆ, ನಿಸ್ಸಹಾಯಕತೆಗಳು ಮಾರ್ಗರೆಟ್ ಮನ ಕಲಕಿ ಜನನ ನಿಯಂತ್ರಣ ಹಕ್ಕಿಗಾಗಿ ಹೋರಾಟ ಮಾಡಲು ನಿರ್ಧರಿಸಿದಳು. ಅನಂತರ ಸೋಷಲಿಸ್ಟ್ ಪಾರ್ಟಿ ಸೇರುವ ಮಾರ್ಗರೆಟ್ ಬಂಡವಾಳಶಾಹಿ ವಿರೋಧವನ್ನು ತನ್ನ ಚಳವಳಿಯ ಜೊತೆ ಸಮೀಕರಿಸಿದಳು. ಯೂರೋಪಿನ ಮಹಿಳಾ ಚಳವಳಿಯ ಮುಂಚೂಣಿಯಲ್ಲಿದ್ದ ಅನತೋಲ್ ಫ್ರಾನ್ಸ್ ಹಾಗೂ ರೋಸಾ ಲುಕ್ಸೆಂಬರ್ಗ್ ಕೂಡಾ ಲೆಕ್ಕವಿಲ್ಲದಷ್ಟು ಮಕ್ಕಳನ್ನು ಹೆರುತ್ತ ಹೋಗುವುದು ಕಡಿಮೆ ಖರ್ಚಿನಲ್ಲಿ ಹೊಸ ಕೆಲಸಗಾರರನ್ನು ಬಂಡವಾಳಶಾಹಿಗಳಿಗೆ ನಿರಂತರವಾಗಿ ಪೂರೈಸುತ್ತ ಹೋದಂತೆ ಎಂದೂ, 'ಬರ್ತ್ ಸ್ಟ್ರೈಕ್– ಜನನ ಮುಷ್ಕರ' ಎಂಬ ಹೊಸ ಆಲೋಚನೆಯನ್ನೂ ಆ ವೇಳೆಗೆ ಮುಂದಿಟ್ಟಿದ್ದರು. ಈ ಕಾರಣಕ್ಕಾಗಿ ಜನನ ನಿಯಂತ್ರಣ ಸೋಷಲಿಸ್ಟ್ ಚಳವಳಿಯಲ್ಲೂ ಮುನ್ನೆಲೆಗೆ ಬಂತು.

ಆದರೆ ಮಾರ್ಗರೆಟ್ ಸೋಷಲಿಸ್ಟ್ ಪಾರ್ಟಿಯಿಂದ ಹೊರಬಂದು ಅದೇವೇಳೆಗೆ ಜನಪ್ರಿಯಗೊಳ್ಳತೊಡಗಿದ್ದ 'ಯೂಜೆನಿಕ್ಸ್ ಮೂವ್‌ಮೆಂಟ್' ನಲ್ಲಿ ಭಾಗಿಯಾಗುವಂತಾಯಿತು. ಆರ್ಥಿಕವಾಗಿ, ಸಾಮಾಜಿಕವಾಗಿ ಫಿಟ್ ಇರುವವರು ಹೆಚ್ಚೆಚ್ಚು ಹೆತ್ತು ಅವರ ಸಂತತಿ ವೃದ್ಧಿಸಲಿ, ದುರ್ಬಲರು ಜನನ ನಿಯಂತ್ರಣಕ್ಕೊಳಗಾಗಲಿ ಎಂಬ ತತ್ವ ಅಮೆರಿಕದ ಯೂಜೆನಿಕ್ಸ್ ಚಳವಳಿಯ ಸಂತಾನಹಕ್ಕು ಕುರಿತ ಧೋರಣೆಯಾಯ್ತು. ಇದು ಕರಿಯರ ಮಾನವಹಕ್ಕು ಉಲ್ಲಂಘಿಸಿದ್ದನ್ನು ಅವಲೋಕಿಸುವ ಮುನ್ನ ಅಂದಿನ ಗುಲಾಮರ ಸ್ಥಿತಿಗತಿ ತಿಳಿಯಬೇಕು.

ಗುಲಾಮಗಿರಿಯಲ್ಲಿ ಹೆಚ್ಚು ದುರ್ಬಳಕೆಯಾದದ್ದು ತಾಯ್ತನ ಹಾಗೂ ಹೆಣ್ತನ. ಬಿಳಿಯರು ಗುಲಾಮ ತಾಯಿಯೆಂದರೆ ಮಕ್ಕಳನ್ನು ಉತ್ಪಾದಿಸುವ ಯಂತ್ರವೆಂದೇ ಪರಿಗಣಿಸಿದ್ದರು. ಪ್ರಾಣಿಗಳ ವ್ಯಾಪಾರದಲ್ಲಿ ಕರು ಹಾಕುವ ಸಾಮರ್ಥ್ಯವನ್ನು ಗಮನಿಸುವಂತೆ, ಗುಲಾಮ ಹೆಂಗಸರ

ಹೆರುವ ಸಾಮರ್ಥ್ಯವನ್ನು ಲೆಕ್ಕಕ್ಕೆ ತೆಗೆದುಕೊಳ್ಳುತ್ತಿದ್ದರು. ಮಹಿಳಾ ಕೂಲಿಗಳಿಗೆ ಬಸುರಿ ಬಾಣಂತಿಯೆಂದು ಕೆಲಸಕ್ಕೆ ರಿಯಾಯ್ತಿ ಇರಲಿಲ್ಲ. ಕೆಲಸ ನಿಧಾನವಾಯಿತೆಂದು ಹೊಲದ ಮೇಲ್ವಿಚಾರಕನಿಂದ ಗಾಯವಾಗುವಂತೆ ಪೆಟ್ಟು ತಿಂದು, ಅವಧಿ ತುಂಬುವ ಮೊದಲೇ ಹೆತ್ತು, ಕೊನೆಗೆ ರಕ್ತಸ್ರಾವವಾಗಿ ಸಾಯುವ ಮೇರಿ ಎಂಬ ಬಸುರಿ ಹುಡುಗಿ; ಹೆಂಡತಿ ಮಕ್ಕಳಿಂದ ನೂರಾರು ಮೈಲು ದೂರದ ಊರಿಗೆ ಮಾರಲ್ಪಟ್ಟ ಗಂಡ ಹೆಂಡತಿಗೆ ಕಾಗದ ಬರೆದು, 'ಮಕ್ಕಳ ಕೂದಲನ್ನು ಸರಿಯಾಗಿ ಪ್ಯಾಕ್ ಮಾಡಿ ಕಳಿಸು. ಅವರಿಗೆ ತಮ್ಮ ತಂದೆಯ ನೆನಪು ಜೀವಂತ ಇರುವಂತೆ ನೋಡಿಕೊ' ಎಂದು ಕೋರುವುದು; ಬೆನ್ನ ಮೇಲಿನ ಚೀಲದಲ್ಲಿ ಎಳೆ ಕೂಸನ್ನು ಹೊತ್ತು ಉರಿಬಿಸಿಲಲ್ಲಿ ಹತ್ತಿ ಮತ್ತು ಹೊಗೆಸೊಪ್ಪಿನ ಹೊಲಗಳಲ್ಲಿ ಬಾರುಕೋಲಿನ ಏಟು ತಪ್ಪಿಸಿಕೊಳ್ಳಲು ಸರಸರ ದುಡಿಯುತ್ತಿದ್ದ ಎಳೆ ಬಾಣಂತಿಯರು; ಕೈಗಾರಿಕೀಕರಣಗೊಂಡ ಅಮೆರಿಕದ ಫ್ಯಾಕ್ಟರಿಗಳಲ್ಲಿ ಪುಕ್ಕಟೆ ಅಥವಾ ಪುಡಿಕಾಸಿನ ಕೂಲಿಗೆ ಮಾರಲ್ಪಟ್ಟ ಕೃಷಿ ಕೂಲಿಗಳು ಹೀಗೇ ಗುಲಾಮರು ಅನುಭವಿಸಿದ ಕಷ್ಟಗಳು ದಾರುಣವಾದವು. ನಂತರ ಗುಲಾಮಗಿರಿ ನಿಷೇಧವಾದರೂ ಗುಲಾಮರ ಕಷ್ಟಗಳು ಹಾಗೇ ಮುಂದುವರೆದವು.

ಯೂಜೆನಿಕ್ಸ್ ಚಳವಳಿ ಕರಿಯರನ್ನು, ಅವರ ಕುಟುಂಬ ವ್ಯವಸ್ಥೆಯನ್ನು ಬೇರೆಯೇ ರೀತಿ ವ್ಯಾಖ್ಯಾನಿಸುತ್ತಿದ್ದ ಕಾಲದಲ್ಲಿ ಒಬ್ಬ ಯೂಜೆನಿಕ್ಸ್ ಪರ ಪ್ರೊಫೆಸರ್ ಅಮೆರಿಕದ ಮೂಲವಾಸಿ ಬಿಳಿಯರಿಗಿಂತ ಪರದೇಶೀ ಕರಿಯರ ಸಂಖ್ಯೆ ಪ್ರವಾಹದಂತೆ ಹೆಚ್ಚಾಗುತ್ತಿದ್ದು, ಬಿಳಿಯರ ಸುಪೀರಿಯಾರಿಟಿ ಉಳಿಸಿಕೊಳ್ಳಲು ತುರ್ತು ಕ್ರಮ ಕೈಗೊಳ್ಳಬೇಕಾಗಿದೆ ಎಂದು ಬರೆದ. 1932ರ ಹೊತ್ತಿಗೆ 26 ರಾಜ್ಯಗಳಲ್ಲಿ ಜನನ ನಿಯಂತ್ರಣ ಕಡ್ಡಾಯವಾಗಿ, ಸೂಕ್ತವಲ್ಲದ ಲಕ್ಷಾಂತರ ಕೇಸುಗಳಿಗೆ ಒತ್ತಾಯದ ಶಸ್ತ್ರಚಿಕಿತ್ಸೆ ಮಾಡಲಾಯಿತು. 1939ರಲ್ಲಿ ನೀಗ್ರೋ ಪ್ರೊಜೆಕ್ಟ್ ಸಿದ್ಧವಾಯಿತು. ಎಂದರೆ 'ಎಗ್ಗಿಲ್ಲದೆ ಮಕ್ಕಳನ್ನು ಹೆರುವ ಬಡ, ದುರ್ಬಲ ಕರಿಯ ಹೆಂಗಸರಿಗೆ ಸರ್ಕಾರದ ನೆರವಿನಿಂದ ಕುಟುಂಬ ಯೋಜನಾ ಶಸ್ತ್ರಚಿಕಿತ್ಸೆ ಮಾಡುವುದು.' ದುರಂತವೆಂದರೆ ಇದನ್ನು ಮಾರ್ಗರೆಟ್ ಥರದ ಮಹಿಳಾ ಹಕ್ಕು ಹೋರಾಟಗಾರರು ಸಮರ್ಥಿಸಿ ಕೊಂಡಿದ್ದು. ಹೀಗೆ ಜನನ ನಿಯಂತ್ರಣವೆಂಬ ಚಳವಳಿ ಜನಾಂಗೀಯ ಬಣ್ಣ ತಳೆದು ಕರಿಯರ ಮೇಲಿನ ದಬ್ಬಾಳಿಕೆಗೆ ಹೊಸ ಕಾರಣವೊಂದನ್ನು ಒದಗಿಸಿತು.

ದಕ್ಷಿಣ ಕ್ಯಾರೋಲಿನಾದ ಒಂದು ಸಣ್ಣ ಪಟ್ಟಣದ ಹೆರಿಗೆ ತಜ್ಞನ ಡೈರಿಯ ಒಂದು ಪುಟ ಇದು: **'ಈ ಕರಿಯ ಹೆಂಗಸರು ಈ ಪಾಟಿ ಮಕ್ಕಳನ್ನು ಹೆತ್ತು ರಾಶಿ ಹಾಕುವುದನ್ನು ನೋಡಿ ರೋಸಿ ಹೋಗಿದ್ದೇನೆ. ಇನ್ನು ಮುಂದೆ ಹೆರಿಗೆ ಮಾಡಿಸುವಾಗ ಕಡ್ಡಾಯ ಶಸ್ತ್ರಚಿಕಿತ್ಸೆಗೆ ಒಪ್ಪಿಸಿ ಜನನ ನಿಯಂತ್ರಣ ಮಾಡಿಬಿಡಬೇಕು. ಇಲ್ಲದಿದ್ದರೆ ನಾನು ಕೊಡುವ ತೆರಿಗೆ ಹಣ ಇವರ ಹೆರಿಗೆಗೆ, ಹೆತ್ತ ಮಕ್ಕಳನ್ನು ಬೆಳೆಸಲಿಕ್ಕೇ ದಂಡವಾಗಿ ಖರ್ಚಾಗುತ್ತದೆ.'** ಅದೇ ವೇಳೆ ಅಲಬಾಮಾದ ರಾಲ್ಫ್ ಸೋದರಿಯರ ಸಂತಾನಹರಣ ಶಸ್ತ್ರಚಿಕಿತ್ಸೆ ಪ್ರಕರಣ ಬೆಳಕಿಗೆ ಬಂತು. ಮಿನ್ನಿ ಲೀ (12ವರ್ಷ), ಮೇರಿ ಅಲಿಸ್ (14 ವರ್ಷ) ಎಂಬ ಮದುವೆಯಾಗದ, ಪ್ರಬುದ್ಧಾವಸ್ಥೆ ತಲುಪಿರದ ಎಳೆ ಹುಡುಗಿಯರನ್ನು ಅವರಿಗೆ ಅರಿವಿಲ್ಲದಂತೆ ಆಪರೇಷನ್ ಥಿಯೇಟರಿಗೆ ಒಯ್ದು ಸಂತಾನಹರಣ ಶಸ್ತ್ರಚಿಕಿತ್ಸೆ ಮಾಡಲಾಗಿತ್ತು. ಅಮೆರಿಕದಾದ್ಯಂತ ಮಾಧ್ಯಮಗಳು ಕಟುಟೀಕೆ ಮಾಡಿದವು. ಆ ಕಾಲದಲ್ಲಿ ಜನನ ನಿಯಂತ್ರಣ ಕಡ್ಡಾಯವಾಗಿ ಗರ್ಭಪಾತ ಕಾನೂನುಬದ್ಧವಾಗದೇ ಇದ್ದುದರಿಂದ, ತಾತ್ಕಾಲಿಕ ಗರ್ಭನಿರೋಧಕಗಳನ್ನು ಕೊಡಲಾಗುತ್ತಿತ್ತು. ಆ ಬಾಲೆಯರ ತಾಯಿ 'ಡಿಪೊ ಪ್ರೊವೆರ' ಎಂಬ ತಾತ್ಕಾಲಿಕ ಗರ್ಭನಿರೋಧಕವನ್ನು ಕೊಡಲು ಒಪ್ಪಿಗೆ ಪತ್ರದ ಮೇಲೆ ಸಹಿ ಹಾಕಿದ್ದಳು. ಆ ಒಪ್ಪಿಗೆಯನ್ನು ಮಕ್ಕಳ ಖಾಯಂ ಸಂತಾನಹರಣಕ್ಕೆ ದುರ್ಬಳಕೆ ಮಾಡಿಕೊಳ್ಳಲಾಗಿತ್ತು. ಇಂಥ ನೂರಾರು ಪ್ರಕರಣಗಳು ಬೆಳಕಿಗೆ ಬಂದು ನಂತರ ಗರ್ಭಪಾತವನ್ನು ಕಾನೂನುಬದ್ಧಗೊಳಿಸಲಾಯಿತು.

ಅಮೆರಿಕದಲ್ಲೂ ಜನನ ನಿಯಂತ್ರಣ ಚಳವಳಿಗಳ ಹಾದಿ ಸುಲಭವಾಗಿರಲಿಲ್ಲ. 19ನೇ ಶತಮಾನದ ಕೊನೆಯ ಭಾಗದ ವೇಳೆಗೆ ಶಿಕ್ಷಣ, ನಗರೀಕರಣಕ್ಕೊಳಗಾಗಿದ್ದ ಬಿಳಿಯ ಮಹಿಳೆಯರಲ್ಲಿ ಜನನ ಪ್ರಮಾಣ ಗಮನಾರ್ಹವಾಗಿ ಕುಸಿದಿತ್ತು. ಅಧ್ಯಕ್ಷ ಥಿಯೋಡೋರ್ ರೂಸ್‌ವೆಲ್ಟ್ 1905ರ ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಜನಾಂಗ ಶುದ್ಧತೆಯನ್ನು ಕಾಪಾಡಿಕೊಂಡು ಹೋಗುವಂತೆ ಹೇಳಿದರು. ಕುಟುಂಬ ಯೋಜನೆ ಶಸ್ತ್ರಚಿಕಿತ್ಸೆ ಮಾಡಿಕೊಳ್ಳುವುದು ಎಂದರೆ ಅದು 'ರೇಸ್ ಸೂಸೈಡ್ ಮತ್ತು ನ್ಯಾಷನಲ್ ಡೆತ್'ಗೆ ಸಮನಾಗುತ್ತದೆ ಎಂದು ಪ್ರತಿಪಾದಿಸಿದರು. ಅದಕ್ಕೆ ಮಹಿಳಾ ಚಳವಳಿಯ ಮುಂಚೂಣಿಯಲ್ಲಿದ್ದ ಕೆಲವರ ಬೆಂಬಲವೂ ದೊರೆಯಿತು. ಕೊನೆಗೆ, 'ಕುಟುಂಬ ಯೋಜನೆ ಜನನ ನಿಯಂತ್ರಣ ಬೇಕಾಗಿರುವುದು ಕರಿಯರಿಗೆ. ಒಂದು ಜನಾಂಗವಾಗಿ ಅವರು ದೈಹಿಕ ಸಾಮರ್ಥ್ಯದ ಕೆಲಸಗಳಿಗಷ್ಟೇ ಅರ್ಹರು. ಬೌದ್ಧಿಕ ಉತ್ತಮಿಕೆಯ ಕೆಲಸಗಳಿಗೆ, ಬೃಹತ್ ಉತ್ಪಾದನಾ ಕಾರ್ಯಗಳಿಗೆ, ವೈಜ್ಞಾನಿಕ ಸಂಶೋಧನೆಗೆ ಅನರ್ಹರು, ಅಂಥವರು ತಮ್ಮ ಸಂತತಿ ಮಿತಿಮೀರಿ ಬೆಳೆಯದಂತೆ ನೋಡಿಕೊಳ್ಳಬೇಕು. ಇಲ್ಲದಿದ್ದರೆ ಬಿಳಿಯ ಶ್ರೀಮಂತರು ನೀಡುವ ತೆರಿಗೆ ಮತ್ತು ಧರ್ಮಾರ್ಥ ದಾನಗಳೆಲ್ಲ ಕರಿಯರ ಕುಟುಂಬ ಸಾಕಲಿಕ್ಕೇ ವ್ಯಯವಾಗಿ ರಾಷ್ಟ್ರೀಯ ನಷ್ಟವಾಗುತ್ತದೆ' ಎಂದು ಹೇಳಲಾಯಿತು. ಹೀಗೆ ಯಾವ ಚಳವಳಿ ಜೈವಿಕ ಕಾರಣಗಳಿಗಾಗಿ ಮಹಿಳೆಯರನ್ನೆಲ್ಲ ಒಗ್ಗೂಡಿಸಬೇಕಿತ್ತೋ, ಅದು ಜನಾಂಗೀಯ ಕಾರಣಗಳಿಗೆ ಛಿದ್ರವಾಯಿತು. ಜನನ ನಿಯಂತ್ರಣ ಹಕ್ಕು ಎಂಬ ಭಾವನೆ ಹೋಗಿ, ಅದು ಕರಿಯ





ಮಹಿಳೆಯರ ಕರ್ತವ್ಯ ಎನ್ನುವಂತಾಯಿತು. ಕಪ್ಪು ಮಹಿಳೆಯರು ಗರ್ಭಪಾತ ಹಕ್ಕು ತಮ್ಮ ಬಿಡುಗಡೆಯ ದಾರಿಯೆಂದು ಭಾವಿಸದೇ ಜನಾಂಗ ನಾಶದ ಸಂಚು ಎಂದು ಭಾವಿಸುವಂತಾಯಿತು.

1965ರಲ್ಲಿ ನೀಗ್ರೋ ಕುಟುಂಬದ ಕುರಿತು ಮೊಯ್ನಿಹ್ಯಾಮ್ ನೀಡಿದ ವರದಿಯಲ್ಲಿ ನೀಗ್ರೋಗಳ ಇಂದಿನ ಕಷ್ಟಕ್ಕೆ ಕಾರಣ ಗುಲಾಮಗಿರಿಯಷ್ಟೇ ಅಲ್ಲ, ಅವರ ಮಾತೃಪ್ರಧಾನ ಸಮಾಜ ವ್ಯವಸ್ಥೆ ಎಂದು ದೂರಲಾಗಿತ್ತು. ಅಮೆರಿಕದ ಇತರ ಸಮುದಾಯಗಳ ಸಾಮಾಜಿಕ ವ್ಯವಸ್ಥೆಗಿಂತ ನೀಗ್ರೋ ಸಮಾಜ ಭಿನ್ನವಾಗಿದ್ದು, ಒಂದು ಗುಂಪಾಗಿ ಅವರನ್ನು ವಿಫಲಗೊಳಿಸಿತು ಹಾಗೂ ನೀಗ್ರೋ ಗಂಡುಗಳನ್ನು ನಿರುಪಯೋಗಿಯನ್ನಾಗಿಸಿತು ಎಂದೂ, ನೀಗ್ರೋ ಸಮಸ್ಯೆಗಳ ಮೂಲ ಜನಾಂಗ ತಾರತಮ್ಯಕ್ಕಿಂತ ಆಳವಾಗಿ ಬೇರುಬಿಟ್ಟ ಅವರ ಸಾಮಾಜಿಕ ವ್ಯವಸ್ಥೆ ಎಂದೂ ಬಿಂಬಿಸಲಾಯಿತು. ನೀಗ್ರೋಗಳ ಅತಿ ಸಂತಾನೋತ್ಪತ್ತಿ ಕೇವಲ ನೀಗ್ರೋ ಕಷ್ಟಗಳಿಗಷ್ಟೇ ಅಲ್ಲ, ದೇಶದ ಸಂಪನ್ಮೂಲವನ್ನು ಕಡಿಮೆಗೊಳಿಸಲೂ ಕಾರಣವಾಗಿದೆ. ನೀಗ್ರೋ ಪುರುಷನಿಗೆ ಮನೆಯೇ ಇಲ್ಲ, ಗುಲಾಮನಾಗಿ ಕುಟುಂಬದಿಂದ ಕುಟುಂಬಕ್ಕೆ ಸ್ಥಳಾಂತರ ಗೊಳ್ಳುವ ಅವನಿಗೆ ಲೈಂಗಿಕ ವ್ಯವಸ್ಥೆ ಸಿಕ್ಕಲ್ಲಿ ಸ್ವಲ್ಪ ಬಾಂಧವ್ಯ ಮೂಡಬಹುದೇ ವಿನಹ, ಕುಟುಂಬ ಪೋಷಿಸುವ ಜವಾಬ್ದಾರಿ ಮರೆತೇಹೋಗಿದೆ ಎಂದೂ ದೂರಲಾಯಿತು. ಗುಲಾಮ ವ್ಯಾಪಾರದಿಂದ ಅನಿವಾರ್ಯವಾದ ಮಾತೃಪ್ರಧಾನ ವ್ಯವಸ್ಥೆ ಎಲ್ಲ ಅನಿಷ್ಟಗಳ ಮೂಲವೆಂದು ಬಣ್ಣಿಸಲಾಯಿತು. ಅವರ ಸಮಾಜ ವ್ಯವಸ್ಥೆಯಲ್ಲಿ ಪುರುಷ ಪಾರಮ್ಯ ಬಂದರೆ ಇದೆಲ್ಲ ಸರಿಹೋಗಬಹುದೆಂದು ಬರೆಯಲಾಯಿತು!

ಸಂತಾನಹರಣ ಚಿಕಿತ್ಸೆ ಕಪ್ಪು ಮಹಿಳೆಯರಿಗಷ್ಟೇ ಅಲ್ಲ, ಅಮೆರಿಕದ ಮೂಲನಿವಾಸಿಗಳಿಗೂ ಚಾಲ್ತಿಯಲ್ಲಿತ್ತು. 1974ರಲ್ಲಿ ಮಗು ಹೆರುವ ಸಾಮರ್ಥ್ಯವುಳ್ಳ ಹೆಂಗಸರಲ್ಲಿ 24% ಮಹಿಳೆಯರು ಶಸ್ತ್ರ ಚಿಕಿತ್ಸೆ ಗೊಳಗಾದರು. **'ಹುಟ್ಟಲಾಗದ ನಮ್ಮ ಮಕ್ಕಳು ಇನ್ನುಮುಂದೆ ಎಂದೂ ಹುಟ್ಟಲಾರರು. ನೀವು ನಮ್ಮ ಕುಲ ನಾಶ ಮಾಡುತ್ತಿದ್ದೀರಿ'** ಎಂದು ನೇಟಿವ್ ಅಮೆರಿಕನ್ ವೈದ್ಯನೊಬ್ಬ ಆರೋಪಿಸಿದ. ಅಮೆರಿಕ ಸರ್ಕಾರದ ರಾಷ್ಟ್ರೀಯ ಜನಸಂಖ್ಯಾ ನೀತಿಯು ಜನಾಂಗ ಭೇಧ ನೀತಿಯನ್ನು ಪ್ರೋತ್ಸಾಹಿಸುತ್ತ ಮುಂದುವರೆಯಿತು. ಅಮೆರಿಕ ಮೂಲ ನಿವಾಸಿಗಳು, ಪೋರ್ಟೋರಿಕನ್ ಮಹಿಳೆಯರು, ಚಿಕನಾ ಮಹಿಳೆಯರು ಮತ್ತು ಕಪ್ಪು ಮಹಿಳೆಯರು ಹೆಚ್ಚೆಚ್ಚು ಸಂತಾನಹರಣ ಚಿಕಿತ್ಸೆಗೊಳಗಾದರು. ಪೋರ್ಟೋರಿಕೋದಲ್ಲಿ ನಿರುದ್ಯೋಗ ಸಮಸ್ಯೆ ಹೆಚ್ಚುತ್ತಿರುವ ಕಾರಣವನ್ನು ಮುಂದೆ ಮಾಡಿ ಮಹಿಳೆಯರ ಸಂತಾನಹರಣ ಮಾಡಲಾಯಿತು. ಅಮೆರಿಕ ಸರ್ಕಾರದ ಈ ನೀತಿಯ ಕಟು ಟೀಕಾಕಾರರಾಗಿದ್ದ ಬೋನಿ ಮಾಸ್ ಹೇಳುವಂತೆ, 'ಇದೇ ರೀತಿ ತಿಂಗಳಿಗೆ 19000 ಸಂತಾನಹರಣ ಶಸ್ತ್ರಚಿಕಿತ್ಸೆ ಮಾಡುತ್ತ ಹೋದರೆ ಬರುವ 10–20 ವರ್ಷಗಳಲ್ಲಿ ಈ ದ್ವೀಪದ ರೈತ ಮತ್ತು ಕಾರ್ಮಿಕ ಜನಸಂಖ್ಯೆ ಇಲ್ಲವಾಗುತ್ತದೆ ಅಷ್ಟೇ..' 1974ರ ವೇಳೆಗೆ ಮಹಿಳೆಗೆ ಗರ್ಭಪಾತ ಮಾಡಿಸಿಕೊಳ್ಳುವ ಹಕ್ಕು ಕೊಡಲಾಯಿತು. ಹಿಟ್ಲರ್‌ನ ನಾಜೀ ಆಡಳಿತವಿದ್ದಷ್ಟು ಕಾಲ ಎರಡೂವರೆ ಲಕ್ಷ ಒತ್ತಾಯದ ಜನನ ನಿಯಂತ್ರಣ ಆಪರೇಶನ್ ಮಾಡಿಸಿದ್ದರೆ, ಅಮೆರಿಕದಂತಹ ಮುಕ್ತ, ಉದಾರವಾದಿ ಸಮಾಜದಲ್ಲಿ 1974ರ ಹೊತ್ತಿಗೆ ವರ್ಷಕ್ಕೆ ಒಂದರಿಂದ ಎರಡು ಲಕ್ಷ ಗರ್ಭಪಾತಗಳು ಒತ್ತಾಯ ಪೂರ್ವಕವಾಗಿ ಸರ್ಕಾರಿ ಅನುದಾನದಿಂದ ನಡೆದವು!

ಸರ್ಕಾರಿ ಸಹಾಯಧನವಿಲ್ಲದೆ ಅಥವಾ ಇನ್ಶೂರೆನ್ಸ್ ನೆರವಿಲ್ಲದೇ ಅಮೆರಿಕದಲ್ಲಿ ವೈದ್ಯಕೀಯ ಸೇವೆ ಸಾಧ್ಯವೇ ಇಲ್ಲ. ಬಡವರಂತೂ ಸಹಾಯಧನದ ಮೇಲೇ ಅವಲಂಬಿತರು. ಹೀಗಿರುತ್ತ 1977ರಲ್ಲಿ ಬಂದ ಹೊಸ ಕಾಯಿದೆ ರೇಪ್ ಮತ್ತು ಪ್ರಾಣಾಪಾಯವಿರುವ ಕಾರಣಕ್ಕಾಗಿ ಮಾಡುವ ಗರ್ಭಪಾತವನ್ನು ಹೊರತುಪಡಿಸಿ ಮತ್ಯಾವುದಕ್ಕೂ ಸರ್ಕಾರ ಸಹಾಯಧನವನ್ನು ನೀಡುವುದಿಲ್ಲ ಎಂದು ಹೇಳಿತು. ಅದಕ್ಕೆ ಧಾರ್ಮಿಕ ಕಾರಣಗಳನ್ನು ನೀಡಲಾಯಿತು. ಗರ್ಭಪಾತ ಮಾಡಿಸಿಕೊಳ್ಳಲಾಗದವರು ಸಂತಾನಹರಣ ಶಸ್ತ್ರಚಿಕಿತ್ಸೆಯನ್ನು ಮಾಡಿಸಿಕೊಂಡರು ಅಥವಾ ಕಾನೂನುಬಾಹಿರ ಗರ್ಭಪಾತಗಳ ಅವಘಡಗಳಿಗೊಳಗಾದರು. ಜನಾಂಗ ತಾರತಮ್ಯ ಧಾರ್ಮಿಕ ಮುಖವಾಡ ಹೊತ್ತು, ಆಳುವವರೂ ಅದನ್ನು ಸಮರ್ಥಿಸಿಕೊಂಡರೆ ಏನಾಗಬಹು ದೆನ್ನುವುದಕ್ಕೆ ಇದೊಂದು ಉದಾಹರಣೆ.

* * *

ಈ ಪುಸ್ತಕದ ಉಳಿದ ಭಾಗಗಳೂ ವಿಚಾರ ಪ್ರಚೋದಿಸುವಂತಿದ್ದು, ಒಂದೆರೆಡು ಚಿಂತನೆಗಳಿಗೆ ನಮ್ಮನ್ನು ಒಡ್ಡುತ್ತವೆ.

- 'ಹಿಂದುಳಿದ' ಭಾರತದಲ್ಲಿ ಮಹಿಳೆಯರ ಇತಿಹಾಸ ಕಾಲದ ಸ್ಥಿತಿಗತಿ ಏನೇ ಇದ್ದರೂ, ಈಗ 'ಮುಂದುವರಿದ' ಅಮೆರಿಕ ಮತ್ತಿತರ ಐರೋಪ್ಯ ಸಮಾಜ ಅದಕ್ಕಿಂತ ಉತ್ತಮವಾಗೇನೂ ಇಲ್ಲ. ಬೆಂಗಳೂರಿನವರಾದ, ಕೆನಡದದಲ್ಲಿ ಪ್ರೊಫೆಸರ್ ಆಗಿರುವ ಸ್ತ್ರೀವಾದಿ ಚಿಂತಕಿ ಡಾ. ವನಜಾ ಧ್ರುವರಾಜನ್ ಹೇಳುವಂತೆ, ಕಲ್ಯಾಣ ರಾಜ್ಯಗಳಾಗಿ ಜನ್ಮ ತಳೆದ ತೃತೀಯ ಜಗತ್ತಿನ ರಾಷ್ಟ್ರಗಳೇ ಮಹಿಳೆಗೆ ಹೆಚ್ಚಿನ ಸ್ವಾತಂತ್ರ್ಯ, ಹಕ್ಕು ನೀಡಿವೆ. ಅಮೆರಿಕ ಮತ್ತು ಯೂರೋಪು ಗಳಲ್ಲಿ ಅವೆಲ್ಲವನ್ನು ಮಹಿಳೆ ಹೋರಾಡಿ ಗಳಿಸಿಕೊಂಡಿದ್ದಾಳೆ. 1917ರಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ಸನ್ನು ಉದ್ದೇಶಿಸಿ ಮಾತನಾಡಿದ ಸರೋಜಿನಿ ನಾಯ್ಡು ಮಹಿಳೆಯರಿಗೂ ಮತದಾನದ ಹಕ್ಕು ಬೇಕೆಂದು ಒತ್ತಾಯಿಸಿದ್ದರು. ಅತಿ ಶ್ರೀಮಂತ ದೇಶ ಸ್ವಿಟ್ಜರ್‌ಲ್ಯಾಂಡಿನಲ್ಲಿ 1970ರವರೆಗೆ ಮಹಿಳೆಗೆ ಮತದಾನದ ಹಕ್ಕು ಇರಲಿಲ್ಲ.. ಇಂಗ್ಲೆಂಡಿನಲ್ಲೂ ಈ ಹಕ್ಕು ದೊರೆತಿದ್ದು ತಡವಾಗಿಯೇ. 1877ರಲ್ಲೇ ಕೋಲ್ಕತಾ ಮತ್ತು ಮುಂಬೈ ವಿಶ್ವವಿದ್ಯಾಲಯಗಳು ಮಹಿಳೆಯರಿಗೆ ಪ್ರವೇಶ ನೀಡಿದರೆ ಪ್ರಪಂಚದ ಅತಿ ಹಳೆಯ ವಿಶ್ವವಿದ್ಯಾಲಯವಾಗಿರುವ ಆಕ್ಸ್‌ಫರ್ಡ್ 1940ರ ತನಕ ಮಹಿಳೆಯರಿಗೆ ಪ್ರವೇಶ

ನೀಡಿರಲಿಲ್ಲ. ವನಜಾ ಗುರುತಿಸುವಂತೆ ಆ ದೇಶಗಳಲ್ಲಿ ಬೆರಳೆಣಿಕೆಯಷ್ಟು ಮಹಿಳೆಯರು ರಾಜಕಾರಣ ದಲ್ಲಿದ್ದಾರೆ ಹಾಗೂ ಅವರಿಗಿಂತ ನಮ್ಮ ದೇಶದ ಪರಿಸ್ಥಿತಿ ಆಶಾದಾಯಕವಾಗಿದ್ದು 33% ಮೀಸಲಾತಿ ಜಾರಿಯಾದರೆ ಇನ್ನಷ್ಟು ಅವಕಾಶ ಸಿಗುವ ಸಾಧ್ಯತೆಯಿದೆ. ಆದರೆ ಅವಕಾಶಗಳನ್ನು ಕೊಟ್ಟಾಗಲೂ ಬಳಸಿಕೊಳ್ಳದೇ ಇದ್ದರೆ ಆಡಳಿತ ತನ್ನ ಹೊಣೆಗಾರಿಕೆ ಯಿಂದ ಕಳಚಿಕೊಳ್ಳಲು ಸುಲಭವಾಗುತ್ತದೆ.

- ಬಡವರು, ಶೋಷಿತರು ತಮ್ಮ ಒಳಿತಿನ ಬಗ್ಗೆ ಯೋಚಿಸುವ ಪ್ರಬುದ್ಧತೆ ಹೊಂದಿಲ್ಲ ಎಂದು ಅವರ ಕ್ಲೆವಿಯರ್‌ಗಳ ಮುಖ ವಾಡದೊಂದಿಗೆ ಶುರುವಾಗುವ ಸಮಾಜಕಲ್ಯಾಣ ಕಾರ್ಯಕ್ರಮಗಳು ಕೊನೆಗೆ ಸಮುದಾಯದ ನಂಬಿಕೆ ಕಳೆದುಕೊಳ್ಳುವಂತಾಗುವುದು ಏಕೆ ಎಂದು ಈ ಉದಾಹರಣೆಯಿಂದ ತಿಳಿಯುತ್ತದೆ. ಭಾರತದಲ್ಲೂ ತುರ್ತುಪರಿಸ್ಥಿತಿಯ ಕಾಲದಲ್ಲಿ ಒತ್ತಾಯದ ಗರ್ಭಪಾತಗಳು, ಕುಟುಂಬ ಯೋಜನೆ ಶಸ್ತ್ರಚಿಕಿತ್ಸೆಗಳು ನಡೆದು ಕುಟುಂಬ ಯೋಜನಾ ಕಾರ್ಯಕ್ರಮಕ್ಕೇ ಮಸಿ ಬಳಿದವು. ಆಗಲೂ ಬಡ, ಹಿಂದುಳಿದ ಮಹಿಳೆಯರೇ ಒತ್ತಾಯದ ಶಸ್ತ್ರ ಚಿಕಿತ್ಸೆಗೆ ಒಳಗಾಗಿರುವ ಸಾಧ್ಯತೆಯಿದೆ. ಸಮುದಾಯದ ಒಳಗೊಳ್ಳುವಿಕೆ ಮತ್ತು ವಿಶ್ವಾಸಾರ್ಹತೆ ಗಳಿಸಿಕೊಳ್ಳುವುದು ಎಲ್ಲ ಸಮಾಜಮುಖಿ ಕಾರ್ಯಕ್ರಮಗಳ ಮೊದಲ ಆದ್ಯತೆಯಾಗದಿದ್ದರೆ ಅವು ಗುರಿ ಮುಟ್ಟಲಾರವು. ಅಷ್ಟೇ ಅಲ್ಲ, ಆಳದಲ್ಲಿ ಅವು ಮಾನವ ಹಕ್ಕು ಉಲ್ಲಂಘಿಸುತ್ತಿರುತ್ತವೆ.

- ಹೆಚ್ಚುಕಮ್ಮಿ ಭಾರತದ ಜಾತಿ ವ್ಯವಸ್ಥೆಯಷ್ಟೇ ಹೀನವಾದ ವರ್ಣಭೇಧ ವ್ಯವಸ್ಥೆಯಿದ್ದ ಅಮೆರಿಕದಲ್ಲಿ ಗುಲಾಮಗಿರಿ ನಿಷೇಧವಾಗಿ ನೂರಾರು ವರ್ಷ ಕಳೆದಿದೆ. ಆದರೂ ಜನಾಂಗೀಯ ತಾರತಮ್ಯ ಸುಪ್ತವಾಗಿ ಹೆಡೆಯಾಡುವುದು ರಾಷ್ಟ್ರೀಯ ನೀತಿ ರೂಪಿಸುವ ಕಾಲದಲ್ಲಿ ವ್ಯಕ್ತವಾಗುತ್ತದೆ. ಭಾರತದಲ್ಲಿ ಅಧಿಕೃತವಾಗಿ ಜಾತ್ಯತೀತ ಆಡಳಿತ ವ್ಯವಸ್ಥೆ ಬಂದು 64 ವರ್ಷಗಳು ಕಳೆದವು. ಆದರೆ ಅದರ ಸೆಕ್ಯುಲರ್ ವಿಶ್ವಾಸಾರ್ಹತೆಯ ಬಗೆಗೆ ಎಲ್ಲರಿಗೂ ಅನುಮಾನಗಳೇಳುತ್ತಿವೆ. ಎಲ್ಲ ಸ್ತರಗಳಲ್ಲಿಯೂ ಜಾತಿ-ಧರ್ಮ-ಪ್ರಾಂತೀಯತೆಗಳು ಗುಪ್ತಗಾಮಿನಿಯಾಗಿ ಆಳುವವರ ಸೈಕ್ ಅನ್ನು ನಿಯಂತ್ರಿಸುತ್ತಿದೆ. ಇವೆಲ್ಲ ಮರೆಯಬಾರದ ಪಾಠಗಳಾಗಿ ಮುಂದಿನ ಹೆಜ್ಜೆಗಳನ್ನು ರೂಪಿಸಬೇಕಿದೆ.

❑



## ಒದೆತ

ನಾನೂ ಒಂದು ಹೆಣ್ಣು
ಹಾಗೆಯೇ ಒಬ್ಬ ತಾಯಿ
ಎಲ್ಲ ತಾಯಂದಿರಂತೆ
ನಿನ್ನನ್ನು ಹೊತ್ತೆ ಹೆತ್ತೆ ಸಾಕಿದೆ
ಎಣೆಯಿಲ್ಲದ ಪ್ರೀತಿಯನ್ನು
ಮುತ್ತಾಗಿ ತುತ್ತಾಗಿ ಉಣಿಸಿದೆ
ಏಳುತ್ತಾ ಬೀಳುತ್ತಾ ನೀ ನಡೆಯುತ್ತಿದ್ದರೇ
ಪಕಪಕನೆಂದು ನಗುತ್ತಾ ಬೆಳೆಯುತ್ತಿದ್ದರೇ
ಸಂತೋಷದಿ ಬೀಗಿ ಹೋದೆ
ಆನಂದವೇ ನಾನಾಗಿ ಹೋದೆ
ಆದರೇ....

ಬೆಳೆದು ನೀನು, ಬೆಳೆಯದ ನಿನ್ನ ಪ್ರೀತಿ
ವಿಷಾದವನ್ನು ಉಳಿಸುತ್ತಾ
ನನ್ನೆದೆಯನ್ನು ಝಾಡಿಸಿ ಒದ್ದಾಗ
ಈಗ ಅನಿಸುತ್ತದೆ
ನಿನ್ನ ಒದೆತಗಳು ನನಗೆ ಹೊಸತಾ?!
ಶಾರೀರಿಕವಾಗಿ
ಕರುಳ ಬಳ್ಳಿಯಲ್ಲಿ ನಿನ್ನ ಒದೆತ
ಆಗ-ಮಧುರವಾದ ನೋವನ್ನುಂಟುಮಾಡಿದರೇ
ಎದೆ ಪೊರೆಗಳಲ್ಲಿ ಭಾವನೆಗಳು
ಅರೆಮಾಗಿದ ಹಣ್ಣುಗಳು
ಹೊಸಬದುಕಿನ ಹೊಳಪಿನ ಕಣ್ಣುಗಳು
ಮಾನಸಿಕವಾಗಿ, ಈಗ-
ನನ್ನ ಭಾವನೆಗಳನ್ನು ನಿರ್ದಾಕ್ಷಿಣ್ಯವಾಗಿ
ಕಾಲ್ತುಳಿತದಿ ನೀ ಹೊಸಕಿ ಹಾಕುತ್ತರೆ
ಮೆದುಳು ಪೊರೆಗಳಲ್ಲಿ
ಅವು ಯಾತನಾಮಯ ಹುಣ್ಣುಗಳು
ನನ್ನ ಜೀವಂತ ದಹಿಸುವ
ಉರಿಯುವ ಕೊಳ್ಳಿಗಳು !

■ ರೋಹಿಣಿ ಸತ್ಯ



# ಸ್ವಾತಂತ್ರ್ಯೋತ್ತರ ಭಾರತೀಯ ಆಂಗ್ಲ ಕಾದಂಬರಿಗಳ ಮಹಿಳಾ ಲೋಕ

■ ಗಿರಿಜಾಶಾಸ್ತ್ರಿ

ಇಪ್ಪತ್ತನೆಯ ಶತಮಾನದ ಪ್ರಮುಖ ಬೆಳವಣಿಗೆಯೆಂದರೆ ಕಾದಂಬರಿ ಪ್ರಕಾರದಲ್ಲಿ ಶಕ್ತಿಶಾಲಿಯಾದ ಮಹಿಳಾ ಲೋಕವೊಂದು ಪ್ರಕಟವಾಗಿದ್ದು, ಇಪ್ಪತ್ತನೇ ಶತಮಾನದ ಸಾಂಸ್ಕೃತಿಕ ಜಗತ್ತಿನಲ್ಲಿ ಆದ ಪಲ್ಲಟಗಳನ್ನು ತನ್ನದೇ ಆದ ರೀತಿಯಲ್ಲಿ ಬಿಂಬಿಸುವಲ್ಲಿ ಯಶಸ್ವಿಯಾಗಿದೆ. ವಾಸ್ತವಿಕತೆಯ ಹೊಸ ಆಯಾಮವನ್ನು, ಸ್ತ್ರೀಯರ ಬದುಕಿನ ಅಸ್ತಿತ್ವದಲ್ಲಿ ಆಗುತ್ತಿರುವ ಬದಲಾವಣೆಗಳನ್ನು 'ಸೋದರಿ ಭಾವ'ವೊಂದು ಪ್ರಕಟ ವಾಗುತ್ತಿರುವುದನ್ನು ಈ ಕಾದಂಬರಿಗಳು ಪ್ರಧಾನ ಲಕ್ಷ್ಯವಾಗಿಸಿಕೊಂಡಿವೆ. ಪಾಶ್ಚಾತ್ಯ ಸ್ತ್ರೀವಾದದಿಂದ ಪ್ರಭಾವಿತ ವಾಗುತ್ತಿರುವುದು ಒಂದು ಕಡೆಯಾದರೆ ತನ್ನ ಸಂಸ್ಕೃತಿಯ ಅನನ್ಯತೆಯನ್ನು, ತನ್ನ ಅಸ್ತಿತ್ವವನ್ನು ಕಂಡು ಕೊಳ್ಳುವ ಹುಡುಕಾಟವು ಇನ್ನೊಂದು ಕಡೆಯಾಗಿದೆ. ಪಿತೃಪ್ರಧಾನ ವ್ಯವಸ್ಥೆಯೊಂದರಲ್ಲಿ, ಸಾಂಪ್ರದಾಯಕ ಭಾರತೀಯ ಕುಟುಂಬ ವೊಂದರಲ್ಲಿ ತನ್ನ ಸ್ವ ಅರಿವಿನ ವ್ಯಾಖ್ಯಾನವನ್ನು ಕಂಡುಕೊಳ್ಳುವುದರ ಮೂಲಕ ಹೊಸ ಮಹಿಳೆಯ ಅಸ್ತಿತ್ವವನ್ನು ಪ್ರಕಟಿಸಲಾಗುತ್ತಿದೆ. ಇದು ತನ್ನ ಸ್ತ್ರೀತ್ವವನ್ನು ನಿರಾಕರಿಸದೇ ಪುರುಷರನ್ನು ಅನುಕರಿಸುವ ಇಲ್ಲವೇ ನಿರಾಕರಿಸುವುದನ್ನು ಬಿಟ್ಟು, ಸ್ತ್ರೀತ್ವದ ಇತ್ಯಾತ್ಮಕ ಭೂಮಿಕೆಯನ್ನು ಕಂಡುಕೊಳ್ಳುವುದರ ಕಡೆಗೆ ಸಾಗಿದೆ. ಇಂತಹ ಸ್ಥಿತಿಯನ್ನು ಸಮರ್ಪಕ ವಾಗಿ ಗ್ರಹಿಸಲು ಸ್ತ್ರೀನಿಷ್ಠ ವಿಮರ್ಶೆ ನೆರವಿಗೆ ಬರುತ್ತದೆ.

ಸ್ತ್ರೀನಿಷ್ಠ ವಿಮರ್ಶೆ ಸಮಾಜೋ ಸಾಂಸ್ಕೃತಿಕ ದೃಷ್ಟಿಯನ್ನು ಆತುಕೊಂಡಿದೆ. ಲಿಂಗವೆನ್ನುವುದು ಜೈವಿಕವಾದರೆ, ಸ್ತ್ರೀತ್ವ ವೆನ್ನುವುದು ಸಮಾಜ ಮತ್ತು ಸಂಸ್ಕೃತಿಗಳ ಉಪಉತ್ಪನ್ನವಾಗಿದೆ. ಜೈವಿಕ ಬೇಧಗಳು ಸ್ತ್ರೀಪುರುಷರ ನಡುವೆ ಇದ್ದರೂ ಅದು ಅಸಮಾನತೆಗೆ ಕಾರಣವಾಗ ಬೇಕಾದ್ದಿಲ್ಲ. ಈಚಿನ ಮನಶ್ಶಾಸ್ತ್ರೀಯ ಮಹಿಳಾವಾದದ ಪ್ರಕಾರ ಸ್ತ್ರೀಯನ್ನೂ ಅವಳ ಗುಣಗಳನ್ನೂ ಅವಗಣಿಸಲಾಗಿದೆ, ಅಪಮೌಲ್ಯೀಕರಣಕ್ಕೆ ಒಳಪಡಿಸಲಾಗಿದೆ. ಇಂದಿನ ಪಿತೃಪ್ರಧಾನ ಸಂಬಂಧಗಳ ಹಿನ್ನೆಲೆಯಲ್ಲಿ ಮನಶ್ಶಾಸ್ತ್ರೀಯ ನೆಲೆಯಲ್ಲಿ ಅವುಗಳನ್ನು ಅಭ್ಯಾಸ ಮಾಡಲಾಗಿದೆ.

ವರ್ಜೀನಿಯಾ ವುಲ್ಫ್ ಹೇಳುವಂತೆ "ಬದುಕಿನಲ್ಲಿಯೇ ಆಗಲೀ, ಕಲೆಯಲ್ಲಾಗಲೀ ಪುರುಷ ಮೌಲ್ಯಗಳು ಸ್ತ್ರೀ ಮೌಲ್ಯಗಳಾಗಲಾರವು. ಅಂತೆಯೇ ಅವಳು ಕಾದಂಬರಿಯೊಂದನ್ನು ಬರೆಯಲಾರಂಭಿಸಿದಾಗ ಸ್ಥಾಪಿತ ಮೌಲ್ಯಗಳನ್ನು ಅವಳು ನಿರಂತರ ವಾಗಿ ಬದಲಾಯಿಸಲು ತೊಡಗುತ್ತಾಳೆ. ಪುರುಷರಿಗೆ ಮುಖ್ಯವೆನಿಸಿದ್ದು ಅವಳಿಗೆ ಅಮುಖ್ಯವಾಗಿ, ಅವನಿಗೆ ಕ್ಷುಲ್ಲಕವೆನಿಸಿದ್ದು ಅವಳಿಗೆ ಮಹತ್ವದ್ದಾಗಿ ಕಾಣಿಸ ಲಾರಂಭಿಸುತ್ತದೆ".

ಅನಿತಾ ದೇಸಾಯಿಯವರ ಪ್ರಕಾರ, "ಈ ಅಸಮಾನತೆಯಿಂದುಂಟಾಗಿರುವ ಭಿನ್ನತೆಗಳು, ಅಸಮಾನತೆಯು ಇಲ್ಲ ವಾಗುವುದರೊಂದಿಗೆ ಇಲ್ಲವಾಗುತ್ತದೆ" ಇದರ ಪ್ರಕಾರ ಅರುಂಧತಿ ರಾಯ್ "ಗಾಡ್ ಆಫ್ ಸ್ಮಾಲ್‌ಥಿಂಗ್ಸ್"ನಲ್ಲಿ ಲುಪ್ತವಾದ ಅರ್ಥಗಳನ್ನು ಪ್ರಕಟಿಸುವ ಲೇಖಕಿಯರ ಪರಂಪರೆಗೆ ಸೇರಿ, ಯಾವುದನ್ನು ಅನುಚಿತ 'ವೆಂದು ಇಲ್ಲಿಯವರೆಗೆ ಆವರಣದಲ್ಲಿ ಇರಿಸಲಾಗಿತ್ತೋ ಅದನ್ನು ಅನಾವರಣ ಗೊಳಿಸುವುದರ ಕಡೆಗೆ ನಡೆಯುವುದರ ಮೂಲಕ ಇದು ಕೇವಲ ಮಹಿಳಾ ಕಾದಂಬರಿಯಾಗದೇ ಈ ಯುಗದ ಯಥಾರ್ಥ ಚಿತ್ರಣ ವಾಗಿದೆ.

ಸ್ತ್ರೀ ಪುರುಷ ಬರಹಗಳಲ್ಲಿನ ವಸ್ತುವಿನಲ್ಲಿಯೇ ಭಿನ್ನತೆಯೊಂದು ಅಡಕವಾಗಿರುತ್ತದೆ. ಇದನ್ನು ಅಭ್ಯಾಸ ಮಾಡುವುದೇ ಸ್ತ್ರೀನಿಷ್ಠ ವಿಮರ್ಶೆಯ ಮುಖ್ಯನೆಲೆಯಾಗಿದೆ. ಎಲೆನ್ ಷುವಾಲ್ಟರ್ ಈ ಸ್ತ್ರೀನಿಷ್ಠತೆಯನ್ನು "ಮಹಿಳಾ ಪಠ್ಯಗಳನ್ನು ಕುರಿತ ವಿದ್ವತ್ತು, ವಸ್ತು ಮತ್ತು ಪ್ರಕಾರಗಳು ಹಾಗೂ ಮಹಿಳಾ ರಚನೆಯನ್ನು ಕುರಿತದ್ದು" ಎಂದು ವ್ಯಾಖ್ಯಾನಿಸಿದ್ದಾಳೆ. ಸ್ತ್ರೀನಿಷ್ಠ ವಿಮರ್ಶೆ ಸ್ವಯಂನಿಷ್ಠವಾದದ್ದು ಮತ್ತು ಪ್ರಾಯೋಗಿಕತೆಗೆ ತೆರೆದುಕೊಂಡದ್ದು. ಸಾಹಿತ್ಯದಲ್ಲಿ ಸ್ತ್ರೀ ಪ್ರತಿನಿಧೀಕರಣವನ್ನು ಇದು ಅಭ್ಯಾಸ ಮಾಡುತ್ತದೆ. ಪುರುಷರು ತಮ್ಮ ಬರಹಗಳಲ್ಲಿ ಸ್ತ್ರೀಯನ್ನು ಕುರಿತು ಬರೆದ ಅವರ ದೃಷ್ಟಿಕೋನ ಪ್ರಕಟವಾಗಿರುವುದರ ಬಗೆಗಿನ ಅಭ್ಯಾಸವನ್ನೂ ಇದು ಒಳಗೊಳ್ಳುತ್ತದೆ. "ಪುರುಷ ನಿರ್ಮಿತ ಸ್ತ್ರೀಪಾತ್ರವನ್ನು ಅಭ್ಯಾಸ ಮಾಡುತ್ತಿದ್ದರೆ ಅಲ್ಲಿ ಸ್ತ್ರೀಯರ ಅನಿಸಿಕೆಗಳಿಗೆ ಬದಲಾಗಿ ಸ್ತ್ರೀಯರನ್ನು ಕುರಿತ ಪುರುಷರ ಅಭಿಪ್ರಾಯಗಳೆ ಪ್ರಕಟವಾಗಿರುತ್ತವೆ" ಆದ್ದರಿಂದಲೇ ಸ್ತ್ರೀನಿಷ್ಠ ವಿಮರ್ಶೆಯು ಪುರುಷರು ಮತ್ತು ಸ್ತ್ರೀಯರನ್ನು ಕುರಿತ ವಿಭಾಗಕ್ಕೆ 'ಮಹಿಳಾ ಕೇಂದ್ರಿತ ವಿಮರ್ಶೆ'ಯೆಂದು ಕರೆದು, ಮಹಿಳೆಯರ ಅನುಭವಕ್ಕೆ ಪ್ರಾಧಾನ್ಯವನ್ನು ಕೊಡುವುದಾಗಿದೆಯೇ ಹೊರತು, ಪುರುಷರು ನಿರ್ಮಿಸಿದ ಸ್ತ್ರೀಮಾದರಿಗಳ ಕಡೆಗಲ್ಲ.

ಪುರುಷ ಪ್ರಾಧಾನ್ಯ ಅಪೇಕ್ಷೆಗಳಿಗೆ ಅನುಗುಣವಾಗಿ ಸ್ತ್ರೀಪಾತ್ರ ನಿರ್ಮಾಣವಾಗಿದೆ. ಅವರ ಚಿತ್ರಣಗಳಲ್ಲಿ ಪ್ರಧನವಾಗಿ ಎರಡು ಧಾರೆಗಳಿವೆ. ಒಂದು, ಇತ್ಯಾತ್ಮಕ ಪಾತ್ರಗಳು–ಸ್ತ್ರೀಯನ್ನು ಸ್ವತಂತ್ರ, ಬುದ್ಧಿಜೀವಿ ಎಂದು ವೀರೋಚಿತಗೊಳಿಸಲಾಗಿದೆ, ಇಲ್ಲವೇ ಅವಳನ್ನು ಪ್ರಾಣಿಗಳಿಗಿಂತ ಕೆಳಗಿಳಿಸಿ ಭೂತ ಪ್ರೇತಗಳ ಸಾಲಿಗೆ ಸೇರಿಸಲಾಗಿದೆ. ಆದ್ದರಿಂದ ಸ್ತ್ರೀನಿಷ್ಠ ವಿಮರ್ಶೆಯು ಸ್ತ್ರೀಯ ನೈಜ ದನಿಗಳನ್ನು ದಾಖಲಿಸುವ ಒಂದು ಶಿಸ್ತಾಗಿದೆ.

ಅರವತ್ತು ಎಪ್ಪತ್ತರ ದಶಕಗಳಲ್ಲಿ ಸ್ತ್ರೀವಾದವು ಮಹಿಳಾ ಪ್ರಜ್ಞೆಯನ್ನು ಬಲಿಪಶುವಾಗಿಸುವುದರ ವಿರುದ್ಧ ಜಾಗೃತಗೊಳಿಸುವುದರ ಕಡೆಗೆ ಗಮನ

ಹರಿಸಿತು. ಮನೆಯಲ್ಲಿ ಅವಳ ಸ್ಥಾನ ಹಾಗೂ ಸಮಾಜದಲ್ಲಿ ಅವಳ ಸ್ಥಿತಿಯನ್ನು ಕುರಿತ ಚಿಂತನೆಗೆ ಜಾಗತಿಕ ನೆಲೆಯಲ್ಲಿ ಪ್ರಾಧಾನ್ಯ ದೊರಕಿತು. ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಸಾಹಿತ್ಯಕ, ಧಾರ್ಮಿಕ ಹಾಗೂ ಕಾನೂನು ಈ ಎಲ್ಲ ಕ್ಷೇತ್ರಗಳಲ್ಲಿ ಸ್ತ್ರೀ ಅವಗಣನೆಯ ವಿರುದ್ಧದ ಹೋರಾಟದ ಸಾಧನವಾಗಿ ಈ ಸ್ತ್ರೀ ಚಳವಳಿ ರೂಪುಗೊಂಡಿತು. ಸಮಾಜದಲ್ಲಿ ಅವಳು ತುಳಿತಕ್ಕೆ ಮತ್ತು ಶೋಷಣೆಗೆ ಒಳಗಾಗಿರುವುದು– ಕೌಟುಂಬಿಕ ಹಾಗೂ ಔದ್ಯಮಿಕ ನೆಲೆಯಲ್ಲಿ ಅವಳ ಈ ಸ್ಥಿತಿಯನ್ನು ಬದಲಾಯಿಸುವುದನ್ನು ಸ್ತ್ರೀವಾದವು ಪ್ರಧಾನ ಗುರಿಯನ್ನಾಗಿಸಿಕೊಂಡಿತು. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಭೌತಿಕ ಹಾಗೂ ಬೌದ್ಧಿಕ ನೆಲೆಗಳಲ್ಲಿ ಎಲ್ಲವನ್ನೂ ನಿಯಂತ್ರಿಸಲಾಗುತ್ತದೆ. ಇದನ್ನು ಸ್ತ್ರೀಪುರುಷರು ಪ್ರಜ್ಞಾಪೂರ್ವಕವಾಗಿ ಬದಲಾಯಿಸಬೇಕು.

ಸಾಂಸ್ಕೃತಿಕವಾಗಿ ಇದು ಹದಿನೇಳನೆಯ ಶತಮಾನದಲ್ಲಿ ಮನೆಯ ಒಳಗಡೆ ಮತ್ತು ಹೊರಗೆ ಸ್ತ್ರೀಪುರುಷ ಬೇಧಗಳನ್ನು ಕುರಿತ ಅರಿವನ್ನು ಮೂಡಿಸುವ ಸಾಧನವಾಗಿ ರೂಪುಗೊಂಡಿತು. ಮಿಲ್ಲರ್‌ನು ಮೊದಲಿಗೆ ಮನೆ ಮತ್ತು ಸಮಾಜದಲ್ಲಿ ಸ್ತ್ರೀಪುರುಷ ಸಮಾನತೆಯನ್ನು ಎತ್ತಿಹಿಡಿದನು. ಆದ್ದರಿಂದ ಅವನನ್ನು ಸ್ತ್ರೀವಾದದ ನೈಜ ಸ್ಥಾಪಕನೆಂದು ಗೌರವಿಸಲಾಗಿದೆ. ಮೊದಲಿನ ಸ್ತ್ರೀವಾದಿಯಾದ ವೋಲ್ಫ್ ಕ್ರಾಫ್ಟ್ 'ಮಹಿಳೆಯರು ತಮ್ಮ ಪುರುಷ ಅಧೀನತ್ವವನ್ನು ನಿರಾಕರಿಸಿ ಅವರು ಪುರುಷರಂತಾಗಬೇಕೆಂದು' ವಾದಿಸುತ್ತಾಳೆ. ಸಿಮೋನ್ ದ ಬುವಾ ತನ್ನ "ದ್ವಿತೀಯಲಿಂಗ" ಕೃತಿಯಲ್ಲಿ ವಾದಿಸುವಂತೆ ಮಹಿಳೆ ಯಾವಾಗಲೂ ಪುರುಷನ ಜೊತೆಯಲ್ಲಿ ಸಮಾನತೆಯನ್ನು ಹೊಂದಿರಲಿಲ್ಲವೆಂದೂ ಅದಕ್ಕೆ ಅವರು ಪುರುಷರನ್ನು ಅವಲಂಬಿಸುತ್ತಿದ್ದುದೇ ಕಾರಣವೆಂದೂ ತಿಳಿಸುತ್ತಾಳೆ. ಆದ್ದರಿಂದ ಸಾಂಪ್ರದಾಯಕ ಸ್ತ್ರೀ ಜಗತ್ತಿನಿಂದ ಹೊರಬರುವುದರ ಮೂಲಕ ಮಾತ್ರ ಪುರುಷರೊಂದಿಗೆ ಸಮಾನತೆಯನ್ನು ಸಾಧಿಸಬಹುದೆಂದು ಭಾವಿಸುತ್ತಾಳೆ. ಮರ್ಲಿನ್ ಫ್ರೆಂಚ್ ತನ್ನ 'ಪವರ್ ಆನ್ ವುಮೆನ್ ಮೆನ್ ಅಂಡ್ ಮಾರಲ್ಸ್' ಕೃತಿಯಲ್ಲಿ ಸ್ತ್ರೀವಾದವು ಕೇವಲ ಪುರುಷ ಪ್ರಪಂಚಕ್ಕೆ ಪ್ರವೇಶಿಸಲು ನಡೆಸುವ ರಾಜಕೀಯ ಚಳವಳಿ ಮಾತ್ರವಲ್ಲ, ಕ್ರಾಂತಿಕಾರಕ ನೈತಿಕ ಚಳವಳಿಯೆಂದು, ರಾಜಕೀಯ ಶಕ್ತಿಯನ್ನು ಸಮಾಜವನ್ನು ಬದಲಾಯಿಸುವ ಸಾಧನವಾಗಿ ಮಾಡುವ ಚಳವಳಿಯೆಂದು ವಾದಿಸುತ್ತಾಳೆ. ಬೆಟ್ಟಿ ಫ್ರೀಡನ್ ತನ್ನ 'ದಿ ಫೆಮಿನೈನ್ ಮಿಸ್ಟಿಕ್' ನಲ್ಲಿ ಸ್ತ್ರೀವಿಕಾಸದ ತೊಡಕುಗಳನ್ನು ವಿವರಿಸುತ್ತಾ "ಮಹಿಳೆ ತಾನು ಹೆಂಡತಿ, ತಾಯಿಯಾಗುವುದನ್ನು ಉಳಿದು ಬೇರೆ ಯಾವುದರ ಬಗ್ಗೆಯೂ ಕನಸು ಕಾಣಲು ಸಾಧ್ಯವಿಲ್ಲವೆಂಬುದನ್ನು ನಿರಾಕರಿಸಿ, ಪುರುಷ ಜಗತ್ತಿಗೆ ಪ್ರವೇಶಿಸುವುದರ ಮೂಲಕ ವಿಕಾಸವನ್ನು ಸಾಧಿಸಬೇಕು" ಎಂದು ತಿಳಿಸುತ್ತಾಳೆ. ಜರ್ಮನ್ ಗ್ರೀರ್ ತನ್ನ 'ಫೀಮೇಲ್ ಯುನೆಕ್'ನಲ್ಲಿ "ಅಸಹಾಯಕತೆಯಿಂದ ಮೇಲೆದ್ದು ಸ್ವತಂತ್ರವಾಗಿ ಓಡಾಡುವುದು ಸ್ತ್ರೀಯ ಜನ್ಮಸಿದ್ಧ ಹಕ್ಕು" ಎಂದು ವಾದಿಸುತ್ತಾಳೆ.

೧೯೮೦ ರ ದಶಕದಲ್ಲಿ ಮಹಿಳಾವಾದ ಬದಲಾವಣೆಗೊಂಡು ಕುಟುಂಬ ಪರ ನಿಲುವಿನ ಕಡೆಗೆ ಹೊರಳಿತು. ತಾಯ್ತನ ಮತ್ತು ಕುಟುಂಬಗಳ ಪ್ರಾಧಾನ್ಯವನ್ನು ಇದು ಸಾರಿತು. ಪುರುಷ ಮತ್ತು ಸ್ತ್ರೀಯ ಗುಣಗಳೆಂದು ಆರೋಪಿಸುವುದನ್ನು ಅಲ್ಲಗಳೆಯುತ್ತಾ, ಇಬ್ಬರೂ ಪರಸ್ಪರರ ಗುಣಗಳಿಂದ ಕಲಿಯಬೇಕಾಗಿದೆ ಎಂದು ವಾದಿಸುತ್ತಾ ಅವರು ಉತ್ತರ ದಕ್ಷಿಣ ಧ್ರುವಗಳೆಂಬುದನ್ನು ನಿರಾಕರಿಸಿತು. ಈಗಾಗಲೇ ಸ್ತ್ರೀಯರು ಪುರುಷರ ಎಲ್ಲ ಕ್ಷೇತ್ರಗಳನ್ನು ವ್ಯಾಪಿಸಿ ತಮ್ಮ ಸಾಮರ್ಥ್ಯವನ್ನು ಪ್ರದರ್ಶಿಸಿರುವುದರಿಂದ ಇನ್ನು ಪುರುಷರು ಸ್ತ್ರೀಯರ ಗುಣಗಳನ್ನು ಕಲಿಯಬೇಕಾದ ಅಗತ್ಯವಿದೆ ಎಂದು ಭಾವಿಸುತ್ತದೆ. ಅಲ್ಲದೇ ಸ್ತ್ರೀ ತನ್ನ ಇತ್ಯಾತ್ಮಕ ಲಕ್ಷಣಗಳನ್ನು ಉಳಿಸಿಕೊಂಡು ಶೋಷಣೆಯಿಂದ ಕೂಡಿದ ವ್ಯವಸ್ಥೆಯನ್ನು ಬದಲಾಯಿಸಬೇಕಾದ ಅಗತ್ಯವನ್ನು ಮನಗಾಣಬೇಕಾಗಿದೆ ಎನ್ನುತ್ತದೆ.

### ಸ್ತ್ರೀ ಕೇಂದ್ರಿತ ಮನಶ್ಶಾಸ್ತ್ರೀಯ ವಿಮರ್ಶೆ

ಸ್ತ್ರೀಯರ ಅನುಭವವನ್ನು ಕೇಂದ್ರವನ್ನಾಗಿಟ್ಟುಕೊಂಡು ರಚಿಸಲಾದ ಮನಶ್ಶಾಸ್ತ್ರಕ್ಕೆ ಸ್ತ್ರೀಕೇಂದ್ರಿತ ಮನಶ್ಶಾಸ್ತ್ರವೆಂದು ಕರೆಯುತ್ತಾರೆ. ಸ್ತ್ರೀಗುಣಗಳೆಂದು ಕರೆಯಲಾಗುವ ಸಹಾನುಭೂತಿ, ಸಾಹಚರ್ಯ, ಪೋಷಕತ್ವ, ಕೌಟುಂಬಿಕ ನೆಲೆಗಳು – ಇವುಗಳನ್ನು ಸ್ತ್ರೀ ಕೇಂದ್ರಿತ ಅನುಭವಗಳು ಎಂದು ಕರೆಯಬಹುದು.

ಸಂಬಂಧಗಳನ್ನು ಹೊಂದುವುದು ಅವುಗಳನ್ನು ಮುಂದುವರೆಸುವುದು ಸ್ತ್ರೀಯ ಪ್ರಧಾನ ನೆಲೆಯಾಗಿದೆ. ಆರೋಗ್ಯಕರ ಸಂಬಂಧಗಳು ಪರಸ್ಪರ ವಿಕಾಸಕ್ಕೆ ಕಾರಣವಾಗುತ್ತವೆ. ಅದಕ್ಕೆ ಐದು ಪ್ರಧಾನ ಲಕ್ಷಣಗಳಿವೆ– ೧. ಹುರುಪು, (zest) ೨. ಕ್ರಿಯೆ, (Action) ೩. ಜ್ಞಾನ (knowledge) ೪. ಸತ್ವ (worth) ಹಾಗೂ ೫. ಬಯಕೆ, (Desire) ಇವುಗಳು ಪರಸ್ಪರರನ್ನು ಬಂಧಿಸಲು ಮತ್ತು ಪೋಷಿಸಲು ಸಹಕಾರಿಯಾಗುತ್ತವೆ. ಸ್ತ್ರೀಯರು ಸಾಮಾನ್ಯವಾಗಿ ಆತ್ಮೀಯ ಸಂಬಂಧಗಳಿಗೆ ಹಾತೊರೆಯುವಾಗ ತಮ್ಮ ನೈಜವಾದ ಸ್ವಭಾವವನ್ನು ಮುಚ್ಚಿಡುತ್ತಾರೆ. ಇದು ಹುಸಿ ಸಂಬಂಧಗಳಿಗೆ ಕಾರಣವಾಗುತ್ತದೆ.

ಸ್ತ್ರೀ ಪುರುಷರು ನೈತಿಕತೆಯ ಕುರಿತು ಭಿನ್ನ ನಿಲುವುಗಳನ್ನು ತಾಳುತ್ತಾರೆ. ಪುರುಷರದು ನ್ಯಾಯದ ನೆಲೆಯಾದರೆ, ಸ್ತ್ರೀಯರದು ಜವಾಬ್ದಾರಿಯ ನೆಲೆಯಾಗಿದೆ. ಅವರು ಉಳಿದವರನ್ನು ಒಳಗೊಳ್ಳುವುದರ ಕಡೆಗೆ, ಪೋಷಿಸುವುದರ ಕಡೆಗೆ ಗಮನ ಹರಿಸುತ್ತಾರೆ. ಮಕ್ಕಳನ್ನು ಬೆಳೆಸುವಾಗ ಹೆಣ್ಣು ಗಂಡುಗಳ ನಡುವೆ ಭೇದವನ್ನು ಕಲ್ಪಿಸಲಾಗುತ್ತದೆ. ಹೆಣ್ಣು ತನ್ನ ತಾಯಿಯೊಂದಿಗೆ ಗುರುತಿಸಿಕೊಳ್ಳುವುದರ ಮೂಲಕ ತಾಯ್ತನಕ್ಕೆ ಸಿದ್ಧಳಾಗುತ್ತಾಳೆ. ಸ್ತ್ರೀ ತಾನು ಬೆಳೆಯುವುದರೊಂದಿಗೆ ಉಳಿದವರ ಜೊತೆ ತನ್ನ ಸಂಬಂಧವನ್ನು ಬೆಳೆಸಿಕೊಳ್ಳುವುದರ ಮೂಲಕ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುತ್ತಾಳೆ. ಸಂಬಂಧಗಳನಾಶ ಎನ್ನುವುದು ಅವಳಿಗೆ ಕೇವಲ ವೈಯಕ್ತಿಕ ನಷ್ಟ ಮಾತ್ರವಲ್ಲದೆ ಒಟ್ಟು ವ್ಯಕ್ತಿತ್ವದ ನಾಶವೆಂದು ಪರಿಗಣಿಸುತ್ತಾಳೆ. ಒಲೆ ಮತ್ತು ಮನೆಗಳ ಸುತ್ತ ಸುತ್ತುವ ಅವಳ ಬದುಕಿನಲ್ಲಿ ಸ್ವ ವಿಕಾಸಕ್ಕೆ ಅವಕಾಶವಿರುವುದಿಲ್ಲ. ಸ್ವ ನಿರಾಕರಣೆಯನ್ನು ಸಮಾಜ ಅವಳಿಗೆ ಆದರ್ಶವೆಂದು ಬಿಂಬಿಸುತ್ತದೆ. ಆದ್ದರಿಂದ ಕೇವಲ ಅವಳು ಪೋಷಕಳಾಗಿಯೇ ಉಳಿದುಬಿಡುತ್ತಾಳೆ.

ಹೆಣ್ಣುಮಕ್ಕಳನ್ನು ಹಡೆಯುವುದರ ಮೂಲಕ ಅವರು ತಾಯ್ತನವನ್ನು ಅವರ ಮೂಲಕ ಮುಂದುವರೆಸುತ್ತಾರೆ. ಆದರೆ ಅದೇ ಹುಡುಗರಲ್ಲಿ ತಾಯ್ತನವನ್ನು ಮೊಟಕುಗೊಳಿಸಲಾಗುತ್ತದೆ. ಹೀಗಾಗಿ ಸ್ತ್ರೀತ್ವವನ್ನು ಅಮುಖ್ಯವೆಂದು ಪರಿಗಣಿಸಿ ಅಪಮೌಲ್ಯೀಕರಣ ಗೊಳಿಸಲಾಗುತ್ತದೆ. ಇಂತಹ ಸಂದರ್ಭದಲ್ಲಿ ಅವರು ಮತ್ತೆ ತಮ್ಮ ಮೌಲ್ಯಗಳನ್ನು ಕಂಡುಕೊಳ್ಳುವಂತೆ ಮಾಡುವುದು ಹೇಗೆ ಎನ್ನುವುದು ಸ್ತ್ರೀವಾದದ ಪ್ರಧಾನ ಸಮಸ್ಯೆಯಾಗಿದೆ. ಅಂತಹ ಸಂದರ್ಭದಲ್ಲಿ ಅದು ಘರ್ಷಣೆಗೆ ದಾರಿಮಾಡುತ್ತದೆ. ಆಗ ಕೆಲವರು ತಾಳ್ಮೆಯ ಹುಸಿ ಆವರಣವನ್ನು ಧರಿಸುವುದರ ಮೂಲಕ ತಮ್ಮನ್ನು ತಾವು ಬಚ್ಚಿಟ್ಟುಕೊಳ್ಳುತ್ತಾರೆ. ಕೆಲವರು ಅದನ್ನು ಹೊರಗೆ ಅಭಿವ್ಯಕ್ತಿಗೊಳಿಸುತ್ತಾರೆ. ಅವರು ಸ್ಥಾಪಿತ ಮೌಲ್ಯಗಳನ್ನು ಧಿಕ್ಕರಿಸಿದರೆ, ಅವರನ್ನು ಅನುಪಯುಕ್ತರೆಂದು ಹಣೆಪಟ್ಟಿ ಕಟ್ಟಲಾಗುತ್ತದೆ. ಅವರು ತಮ್ಮ ಬೆಳವಣಿಗೆಗೆ ಪ್ರಯತ್ನ ಮಾಡಿದಾಗಲೆಲ್ಲಾ ಸಮಾಜದ ಬೆಳವಣಿಗೆಗೆ ಧಕ್ಕೆ ತರುವ ಅಪಾಯಕಾರಿಗಳೆಂದು ಪರಿಗಣಿಸಲಾಗುತ್ತದೆ.

ಅವರು ಬದಲಾವಣೆಗೆ ಹಾತೊರೆದರೆ, ಅವರು ಕರ್ತವ್ಯದಿಂದ ವಿಮುಖರಾದಂತೆ ಪುರುಷರಿಗೆ ಕಾಣಿಸುತ್ತದೆ.

ಇದಕ್ಕೆ ವಿರುದ್ಧವಾಗಿ ವಾದಿಸುತ್ತಾ, ಮಿಲ್ಲರ್ ಮುಂತಾದವರು ಹೇಳುವುದೆಂದರೆ ಸ್ತ್ರೀಯರ ವಿಕಾಸವೆಂಬುದು, ಒಟ್ಟು ಮನುಕುಲದ ವಿಕಾಸಕ್ಕೆ ಕಾರಣವಾಗುತ್ತದೆ. ಮಹಿಳೆಯರು ತಮ್ಮ ವಿಕಾಸಕ್ಕಾಗಿ ಮಾಡುವ ಪ್ರಯತ್ನಗಳು ಅವರ ಜನ್ಮಸಿದ್ಧ ಮಾನವ ಹಕ್ಕುಗಳಾಗಿವೆ. ಅದು ಉಳಿದವರಿಗೆ ವಿನಾಶಕಾರಿಯಾಗಿ ಯಾಕೆ ಕಾಣಬೇಕು? ಬಹುಶಃ ಅವರು ತಮ್ಮ ವಿಕಾಸಕ್ಕಾಗಿ ಮಾಡುವ ಪ್ರಯತ್ನಗಳು ತಮ್ಮ ಬೆಳವಣಿಗೆಗೆ ಧಕ್ಕೆಯನ್ನು ಉಂಟುಮಾಡುತ್ತವೆ ಎಂಬ ವಾದದಲ್ಲಿ ಹುರುಳಿಲ್ಲ. ಯಾಕೆಂದರೆ ತಾವು ಬೆಳೆಯದೇ ಇನ್ನೊಬ್ಬರ ಬೆಳವಣಿಗೆಗೆ ಸರಿಯಾದ ಕಾರಣರಾಗಲಾರರು.

ಸ್ತ್ರೀಯರ ಸಂಬಂಧಗಳ ಬಗೆಗಿನ ಕಾಳಜಿ ವಾಸ್ತವವಾಗಿ ಜಗತ್ತನ್ನು, ಬದುಕನ್ನು ಒಳ್ಳೆಯದನ್ನಾಗಿ ಪರಿವರ್ತಿಸಬಲ್ಲ ಶಕ್ತಿಯನ್ನು ಪಡೆದಿದೆ. ಆದ್ದರಿಂದ ಅವರ ಸಂಬಂಧಗಳನ್ನು ಬೆಳೆಸುವ, ಗೌರವಿಸುವ, ಶಕ್ತಿಯನ್ನು ಗುರುತಿಸುವ ಕಾರ್ಯವಾಗಬೇಕಾಗಿದೆ. ಇದು ಅವರನ್ನು ಬಲಿಪಶುವನ್ನಾಗಿಸುವ, ದಾಸರನ್ನಾಗಿಸುವ ಕ್ರೌರ್ಯದಿಂದ ಬಿಡುಗಡೆಮಾಡುತ್ತದೆ.

ಆದರೆ ಭಾರತೀಯ ಸಂದರ್ಭದಲ್ಲಿ ಲಿಂಗಾಧರಿತ ವಿಭಜನೆ ಸಾಮಾನ್ಯವಾಗಿದೆ. ಶಾಸ್ತ್ರಗಳಲ್ಲಿ ಉಕ್ತವಾಗಿರುವ ಸ್ತ್ರೀಪುರುಷರ ನಡುವಿನ ಭೇದವನ್ನು ಇಂದಿಗೂ ಅಕ್ಷರಶಃ ಅನುಸರಿಸಲಾಗುತ್ತಿದೆ. ಅವುಗಳಿಂದ ಬಿಡುಗಡೆಗೊಳ್ಳುವುದು ಅಷ್ಟೇನೂ ಸುಲಭವಲ್ಲ. ಏಕೆಂದರೆ ಅದು ಭಾರತೀಯರ ಮನಸ್ಸಿನಲ್ಲಿ ಆಳವಾಗಿ ಬೇರೂರಿದೆ. ನಮ್ಮ ಸಂಸ್ಕೃತಿಯು ಸ್ತ್ರೀಯರ ತ್ಯಾಗ ಬಲಿದಾನಗಳನ್ನು ಪುರಾಣಗಳ ಮೂಲಕ ಕೊಂಡಾಡುತ್ತದೆ. ಅವರಿಗೆ ವಿಶಿಷ್ಟ ಸ್ತ್ರೀಧರ್ಮ, ಸ್ತ್ರೀನೀತಿಗಳು ರಚಿತವಾಗಿವೆ. ಅವರನ್ನು ಕಾಲಾತೀತ ಮಾದರಿಗಳಾದ ಸೀತೆ ಸಾವಿತ್ರಿಯರ ಜಾಡಿನಲ್ಲಿ ಬೆಳೆಸಲಾಗುತ್ತದೆ.

ಸ್ವಾತಂತ್ರ್ಯೋತ್ತರ ಭಾರತೀಯ ಆಂಗ್ಲ ಮಹಿಳಾ ಸಾಹಿತ್ಯವು ಸ್ತ್ರೀತ್ವದಿಂದ ಸ್ತ್ರೀಯಾಗುವುದರ ಕಡೆಗೆ ನಡೆಯುವ ಶೋಧವನ್ನು ತಮ್ಮ ಮಹಿಳಾ ಪಾತ್ರಗಳ ಮೂಲಕ ನಡೆಸುತ್ತದೆ. ಸುಮಾರು ಆರು ದಶಕಗಳ ಸ್ವಾತಂತ್ರ್ಯೋತ್ತರ ಆಂಗ್ಲ ಮಹಿಳಾ ಸಾಹಿತ್ಯದಲ್ಲಿ ವಿಭಿನ್ನ ಬಗೆಯ ಕಾದಂಬರಿ ಕಾರ್ತಿಯರು ವೈವಿಧ್ಯಮಯ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಮತ್ತು ಆಧ್ಯಾತ್ಮಿಕ ವಿಷಯಗಳ ಕುರಿತು ತಮ್ಮ ಅನುಭವಗಳನ್ನು ವ್ಯಕ್ತಪಡಿಸಿದ್ದಾರೆ. ಅದರಲ್ಲಿ ಸ್ವಾತಂತ್ರ್ಯೋತ್ತರದ ಹಳಹಳಿಕೆ, ನವವಸಾಹತು ಶಾಹಿಯ ಅರಿವು ಹಾಗೂ ಆಧುನಿಕೋತ್ತರ ಪುನರ್ನಿರ್ಮಾಣದ ತಲ್ಲಣಗಳನ್ನು ಗುರುತಿಸಬಹುದಾಗಿದೆ. ಇದು ಅವರಿಗೆ ಭಾರತದಲ್ಲಿ ಮಾತ್ರವಲ್ಲದೆ ವಿದೇಶಗಳಲ್ಲೂ ಸ್ಥಾನಮಾನಗಳನ್ನು ತಂದುಕೊಟ್ಟಿದೆ. ಇದಕ್ಕೆ ಅವರು ಕಾಪಾಡಿಕೊಂಡಿರುವ ಉನ್ನತಮಟ್ಟದ ಬರವಣಿಗೆ ಹಾಗೂ ಪ್ರಯೋಗಶೀಲತೆಗಳು ಕಾರಣವಾಗಿವೆ. ಗ್ರಾಮೀಣ ಮತ್ತು ನಾಗರೀಕ, ಶ್ರೀಮಂತ ಹಾಗೂ ಬಡ, ಉನ್ನತ ವರ್ಗ ಮತ್ತು ಕೆಳವರ್ಗ, ಉಚ್ಚಜಾತಿ ಹಾಗೂ ದಲಿತ- ಹೀಗೆ ಎಲ್ಲ ಸಾಮಾಜಿಕ ಸ್ತರಗಳಲ್ಲೂ ಆವರಿಸಿದೆ.

ಎರಡನೇ ತಲೆಮಾರಿನ ಲೇಖಕಿಯರು ವಾಸ್ತವಿಕ ಭಾರತೀಯ ಜೀವನಕ್ಕೆ ಸರಿಯಾಗಿಯೇ ಪ್ರತಿಸ್ಪಂದಿಸುತ್ತಿದ್ದಾರೆ. ಈ ವಿಭಾಗಕ್ಕೆ ಕಮಲಾ ಮಾರ್ಕಂಡೇಯ, ಶಶಿದೇಶಪಾಂಡೆ, ಅನಿತಾ ದೇಸಾಯಿ, ರುತ್ ಜಾಬ್ವಾಲಾ ಮುಂತಾದವರು ಸೇರುತ್ತಾರೆ. ಇದಕ್ಕೆ ಕಾರಣ ಅವರಿಗೆ ಒಳಗಿನ ಹಾಗೂ ಹೊರಗಿನ ಜಗತ್ತಿನ ವಿಶಾಲ ಪರಿಚಯವಿರುವುದು. ಅವರ ಉಚ್ಚ ವಿದ್ಯಾಭ್ಯಾಸ ಮತ್ತು ಬೌದ್ಧಿಕ ಸಿದ್ಧತೆಗಳು ಅವರ ಬರವಣಿಗೆಗೆ ಆಳವಾದ ಮಾನಸಿಕ ಸ್ತರಗಳಿಗೆ ಹೋಗಲು ಶಕ್ತಿಯನ್ನು ಕೊಟ್ಟಿದೆ. ಇವರು ತಮ್ಮ ಕೃತಿಗಳಲ್ಲಿ ಶೋಷಣೆಗೆ ಒಳಗಾದ ಸ್ತ್ರೀಯರ ಚಿತ್ರಣವನ್ನು ನೀಡುವುದರಲ್ಲಿ ಯಶಸ್ವಿಯಾಗಿದ್ದಾರೆ. ಅಲ್ಲದೆ ಸಮಾಜದಲ್ಲಿ ಆಗಬೇಕಾದ ಸಾಮೂಹಿಕ ಬದಲಾವಣೆಯಿಂದ ಹೇಗೆ ಸ್ತ್ರೀಯನ್ನು ಅವಳ ದುಃಖದಿಂದ ಬಿಡುಗಡೆಗೊಳಿಸಬಹುದೆಂಬುದನ್ನು ತೋರಿಸಿಕೊಟ್ಟಿದ್ದಾರೆ.

ಅವರು ಆಧುನಿಕ ಸ್ತ್ರೀಯರ ಅಂತರಂಗದ ಬದುಕನ್ನು ಶೋಧಿಸವುದರೊಟ್ಟಿಗೆ ಸಾಂಸ್ಕೃತಿಕ, ರಾಜಕೀಯ ಹಾಗೂ ಸಾಮಾಜಿಕ ವಿಷಯಗಳ ಕಡೆಗೂ ಗಮನ ಹರಿಸಿದ್ದಾರೆ. ಅವರು ಚಿತ್ರಿಸಿದ ಸ್ತ್ರೀ ಪಾತ್ರಗಳು ಸಾಮಾಜಿಕ ಮೌಲ್ಯಗಳನ್ನು ಕುರಿತು ವಿವೇಚನೆ ನಡೆಸುವುದರೊಂದಿಗೆ ಕಾದಂಬರಿಕಾರ್ತಿಯರ ಪ್ರಜ್ಞೆ ಹೊರಜಗತ್ತಿನೊಂದಿಗೆ ಸಂಪರ್ಕ ಸಾಧಿಸುವ ಸಾಧನಗಳೂ ಆಗಿದ್ದಾರೆ. ಈ ಹಿನ್ನೆಲೆಯಲ್ಲಿ ಸ್ತ್ರೀ ಪಾತ್ರಗಳು ಜೀವನ ವಿಕಾಸದ ಜೊತೆಗೆ ಜೀವನ ವಿಮುಖತೆ, ಅವನತಿಗಳನ್ನೂ ಸಂಕೇತಿಸುತ್ತವೆ. ಅವರ ಕಾದಂಬರಿಗಳಲ್ಲಿನ ಸ್ತ್ರೀ ಪಾತ್ರಗಳು ಸಾಮಾಜಿಕ ಭೇದಗಳ ವಿರುದ್ಧ ಸಿಡಿದೇಳುವುದರ ಮೂಲಕ ಸ್ತ್ರೀ ಜಾಗೃತಿಗೆ ಕಾರಣವಾಗುತ್ತವೆ. ಅವು ಯಾವಾಗಲೂ ಅವರ ಸಮಸ್ಯೆಗಳನ್ನು ಪರಿಹರಿಸದಿರಬಹುದು ಆದರೆ ತಾನು ತಟಸ್ಥ ನೀತಿಯನ್ನು ಅನುಸರಿಸದೇ ಅದರ ವಿರುದ್ಧ ಹೋರಾಟ ಮಾಡಿದ ತೃಪ್ತಿಯಾದರೂ ದೊರೆಯುತ್ತದೆ. ಸಮಾನತೆ ಮತ್ತು ಸ್ವಾತಂತ್ರ್ಯಗಳು ಭಾರತೀಯ ಸ್ತ್ರೀಗೆ ಪರಿಚಿತವಾದರೂ ಅದು ಬದುಕಿನಲ್ಲಿ ಇಲ್ಲದ ಸ್ಥಿತಿಯನ್ನು ಅವಳು ಸುಲಭವಾಗಿ ಒಪ್ಪಿಕೊಳ್ಳದೇ ಅವುಗಳಿಗೋಸ್ಕರ ಹೋರಾಡುತ್ತಾಳೆ. ಇಂತಹ ಸಂದರ್ಭಗಳಲ್ಲಿ ಅವಳು ಘರ್ಷಣೆಗಳನ್ನು ಎದುರಿಸುತ್ತಾ ಉಳಿಯಬೇಕಾಗುತ್ತದೆ. ಆಗ ಅವಳು ಅದನ್ನು ತನ್ನ ಶಕ್ತಿ ಮತ್ತು ಸಮಗ್ರತೆಯ ಮೂಲಕ ಸಾಧಿಸುತ್ತಾಳೆ. ಮುಂದುವರೆದ ದೇಶದ ಮಹಿಳೆಯರ ಸಮಸ್ಯೆಗಳಿಗೂ, ಹಿಂದುಳಿದ ದೇಶದ ಮಹಿಳೆಯರ ಸಮಸ್ಯೆಗಳಿಗೂ ವ್ಯತ್ಯಾಸವಿದೆ. ಅವರಿಗೆ ಅಸ್ಮಿತೆ, ಔದ್ಯೋಗಿಕ ಸಮಾನತೆ ಮತ್ತು ಲೈಂಗಿಕ ಸಮಾನತೆಗಳು ಮುಖ್ಯವಾದರೆ ಇಲ್ಲಿನ ಪ್ರಧಾನ ಸಮಸ್ಯೆಯೆಂದರೆ ಬದುಕಿ ಉಳಿಯುವುದೇ ಆಗಿದೆ. ಇಲ್ಲಿನ ಎಲ್ಲ ಮಹಿಳೆಯರಿಗೆ ಸಮಾನವಾದ ಸಂಗತಿಯೆಂದರೆ ತಮ್ಮ ಏಳಿಗೆಗೆ ಪರ್ಯಾಯ ಕೇಂದ್ರಗಳನ್ನು ಹುಡುಕಿಕೊಳ್ಳುವುದೇ ಆಗಿದೆ.

ಬಹುತೇಕ ಭಾರತೀಯ ಲೇಖಕಿಯರು ಸ್ತ್ರೀಪಾತ್ರಗಳ ಮೂಲಕ ಸ್ತ್ರೀ ಪ್ರಜ್ಞೆಯನ್ನು, ಇದರ ಜಾಗೃತಿಯನ್ನು, ಅಂತಿಮವಾಗಿ ತಮ್ಮ ಅಂತರಂಗವನ್ನು ಶ್ರೀಮಂತಗೊಳಿಸಿಕೊಳ್ಳುವುದನ್ನು ಚಿತ್ರಿಸುತ್ತಾರೆ. ಅಂತರಂಗದ ಪರಿವೀಕ್ಷಣೆ, ಅಂತರಂಗದ ಶೋಧಗಳು ತಮ್ಮಲ್ಲಿ ಅಂತರ್ಗತವಾದ ಶಕ್ತಿಯನ್ನು ಕಂಡುಕೊಳ್ಳಲು ಸಹಾಯಕವಾಗುತ್ತವೆ. ಈಗ ಹೆಣ್ಣು ವಿಮೋಚನೆಯ ಸಾಧನವಾಗಿ, ತಾಯಾಗಿ, ಹೆಂಡತಿಯಾಗಿ, ಸೋದರಿಯಾಗಿ, ಮಗಳಾಗಿ ಕುಟುಂಬವನ್ನು ಕಾಪಾಡುವ ಶಕ್ತಿಯಾಗಿದ್ದಾಳೆ. ಈ ಕಾದಂಬರಿಗಳು ಸ್ತ್ರೀ ಹೇಗೆ ಸಂಸ್ಕೃತಿಯ ಬೆನ್ನೆಲುಬಾಗಿ ದೈಹಿಕ, ಭಾವನಾತ್ಮಕ ಸಂಸ್ಕೃತಿಯ ಅಂತಃಶಕ್ತಿಯನ್ನು ತಮ್ಮ ಕುಟುಂಬಗಳಿಗೆ ಧಾರೆಯೆರೆಯುವುದರ ಮೂಲಕ ಮಾನವ ಕುಟುಂಬವನ್ನು ಮುನ್ನಡೆಸುವ ಶಕ್ತಿಯಾಗಿದೆ ಎಂಬುದನ್ನು ಚಿತ್ರಿಸುತ್ತವೆ. ಇದನ್ನು ಮೂರುನೆಲೆಗಳಲ್ಲಿ ಕಾಣಬಹುದು-ಮೊದಲನೆಯದು ಅಂತರಂಗ ಪರಿವೀಕ್ಷಣೆಯದು, ಎರಡನೆಯದು ಎಲ್ಲವನ್ನೂ ಸಹಿಸುವುದರ ಮೂಲಕ ಆದರ್ಶ ಜೀವಿಗಳಾಗುವುದರಲ್ಲಿ,

ಮೂರನೆಯದರಲ್ಲಿ ತಮ್ಮ ಬಗ್ಗೆ ಹೊಸ ಶೋಧಗಳನ್ನು ಮಾಡುವುದರ ಮೂಲಕ ಜಗತ್ತಿನೊಂದಿಗಿನ ತಮ್ಮ ಸಂಬಂಧವನ್ನು ಅರ್ಥಪೂರ್ಣವಾಗಿ ಸ್ಥಾಪಿಸುತ್ತಾರೆ. ಪುರುಷ ಪ್ರಧಾನ ಸಮಾಜದಲ್ಲಿ, ಸಾಂಪ್ರದಾಯಕ ನೆಲೆಗಳನ್ನು ಈ ಪಾತ್ರಗಳು ಸರಿಯಾಗಿ ಹೊಂದಿಕೊಳ್ಳುತ್ತವೆ ಮತ್ತು ತಮ್ಮದೇ ಆದ ಮೌಲ್ಯವ್ಯವಸ್ಥೆಯನ್ನು ಸ್ಥಾಪಿಸುವುದರಲ್ಲಿ ತಮ್ಮ ಅಂತರಂಗದ ಶಕ್ತಿಯಿಂದ ಸಾಮಾಜಿಕ ಅನ್ಯಾಯಗಳನ್ನು ಎದುರಿಸಲು ಸಮರ್ಥವಾಗುತ್ತವೆ.

ಕಮಲಾ ಮಾರ್ಕಂಡೇಯ ಅವರ ಹೆಚ್ಚಿನ ಬರಹಗಳಲ್ಲಿ ಸ್ತ್ರೀ ಪಾತ್ರಗಳು ಪರಂಪರೆ ಮತ್ತು ಆಧುನಿಕತೆಯ ತಿಕ್ಕಾಟಕ್ಕೆ ಒಳಗಾಗಿವೆ. ಸ್ವಾಯತ್ತತೆಯ ಬಯಕೆ ಮತ್ತು ಪೋಷಕತ್ವವನ್ನು ಮಗಳಾಗಿ, ತಾಯಿಯಾಗಿ, ಹೆಂಡತಿಯಾಗಿ ತಮ್ಮ ಕರ್ತವ್ಯಗಳನ್ನು ನಿಭಾಯಿಸುವುದರ ಮೂಲಕ ತಮ್ಮ ಘನತೆಯನ್ನು ಅವು ಕಾಯ್ದುಕೊಳ್ಳುತ್ತವೆ. ಈ ಎಲ್ಲದರೊಂದಿಗೆ ಭಾರತೀಯನಾರಿ ಅತ್ಯಂತ ಜಾಣ್ಮೆಯಿಂದ ತನ್ನನ್ನು ತಾನು ತೊಡಗಿಸುವುದರಲ್ಲಿ ಯಶಸ್ವಿಯಾಗುತ್ತಾಳೆ. ಅವಳು ತನ್ನ ಕುಟುಂಬವನ್ನು ಪೋಷಿಸುತ್ತಾಳೆ, ಯಾಕೆಂದರೆ ಅದು ಅವಳಿಗೆ ಬೇಕಾಗಿದೆ. ಅವಳು ಸ್ವಾಯತ್ತೆಯನ್ನು ಅನೇಕ ರೀತಿಯಲ್ಲಿ ಸ್ಥಾಪಿಸುತ್ತಾಳೆ. ಕಮಲಾ ಮಾರ್ಕಂಡೇಯ ಅವರ ಕಾದಂಬರಿಯಲ್ಲಿ ಸ್ತ್ರೀ ಪಾತ್ರಗಳು ಆರ್ಥಿಕ ಅಸಮಾನತೆಯ ಬಲಿಪಶುಗಳೆ ಹೌದು. ಆದರೆ ಅವು ಅವುಗಳನ್ನು ಮೀರುವುದರ ಮೂಲಕ ವಿಶಾಲವಾದ ಸಾರ್ವತ್ರಿಕ ಪ್ರೇಮ ಮತ್ತು ಸೌಹಾರ್ದತೆಯ ಕಡೆಗೆ ತುಡಿಯುತ್ತವೆ. ಆದ್ದರಿಂದಲೇ ಅವರ ದೈಹಿಕ ಹಾಗೂ ಭಾವನಾತ್ಮಕ ಶಕ್ತಿಗಳು ಪ್ರಶಂಸಾರ್ಹವಾಗಿವೆ.

ಅನಿತಾ ದೇಸಾಯಿ ಸಹ ತಮ್ಮ ಕಾದಂಬರಿಗಳಲ್ಲಿ ಸ್ತ್ರೀಯರ ಮಾನಸಿಕ ಜಗತ್ತಿನ ಆಳಕ್ಕೆ ಪ್ರವೇಶಿಸಿ ಅವು ತಮ್ಮ ಮತ್ತು ಸಮಾಜದ ನಡುವೆ ಸ್ಥಿತಿಸ್ಥಾಪಕತ್ವವನ್ನು ಸ್ಥಾಪಿಸಲು ಪ್ರಯತ್ನಿಸುತ್ತವೆ. ಅದು ಸಾಧ್ಯವಾಗದಿದ್ದಾಗ ಪರಕೀಯತೆಯನ್ನು ಉಂಟುಮಾಡುತ್ತವೆ. ಅವುಗಳನ್ನು ಮೀರಬಲ್ಲ ಶಕ್ತಿ ಆ ಪಾತ್ರಗಳಿಗೆ ಇದೆ. ಅನಿತಾ ದೇಸಾಯಿ ತಮ್ಮ ಸಂದರ್ಶನವೊಂದರಲ್ಲಿ ಹೇಳುವಂತೆ "ಅವರ ಬರವಣಿಗೆಯ ಉದ್ದೇಶವೆಂದರೆ ತಮ್ಮ ಸ್ವಂತದ ಸಂಶೋಧನೆ ಮತ್ತು ಅದನ್ನು ಕಲೆಯ ಮೂಲಕ ಅಭಿವ್ಯಕ್ತಿಗೊಳಿಸುವುದು. ವಾಸ್ತವವನ್ನು ಮತ್ತು ಅದರ ಮಹತ್ವವನ್ನು ಮನಗಾಣಿಸಲು ಹೊರಗಿನದಕ್ಕಿಂತ ಒಳಗಿನದ್ದಕ್ಕೆ ಪ್ರವೇಶ ಮಾಡಿ ಆಳವನ್ನು ಉದ್ದೀಪನ ಗೊಳಿಸಿ ಅದನ್ನು ಜಗತ್ತಿಗೆ ತೋರಿಸಿ ಕೊಡುವುದೇ ಆಗಿದೆ"

ಅನಿತಾದೇಸಾಯಿಯವರ ಪ್ರತಿ ಪಾತ್ರವೂ ವಾಸ್ತವತೆಯನ್ನು ಗ್ರಹಿಸಲು ಎದುರಿಸುವ ತೊಡಕುಗಳನ್ನು ಕೆಲಮಟ್ಟಿಗೆ ಹೊಂದಾಣಿಕೆ ಮಾಡಿಕೊಂಡರೂ ಯಶಸ್ಸನ್ನು ಸಾಧಿಸುತ್ತವೆ.

ಶಶಿ ದೇಶಪಾಂಡೆ ತಮ್ಮ ಎಲ್ಲಾ ಕೃತಿಗಳಲ್ಲಿ ಸ್ತ್ರೀಯ ಮಾನಸಿಕ ಸ್ತರವನ್ನೂ ಸಮಾಜವನ್ನೂ ಏಕಕಾಲಕ್ಕೆ ಚಿತ್ರಿಸುತ್ತಾರೆ. ಜೀವನದಲ್ಲಿನ ದುಸ್ತರ ಅನುಭವಗಳಿಂದಾದ ಮಾನಸಿಕ ಆಘಾತಗಳನ್ನು ಅವರ ಪಾತ್ರಗಳು ಹೇಗೆ ಎದುರಿಸುತ್ತವೆ ಎಂಬುದನ್ನು ಚಿತ್ರಿಸುತ್ತಾರೆ. ಈ ನೋವಿನ ಅನುಭವ ಅಂತರಂಗದ ಪರಿವೀಕ್ಷಣೆಗೆ ಎಡಮಾಡಿಕೊಡುತ್ತದೆ. ಅದು ಜೀವನವನ್ನು ಕುರಿತ ಹೊಸ ನೋಟಕ್ಕೆ ಅಂತಿಮವಾಗಿ ಅನುವು ಮಾಡಿಕೊಡುತ್ತದೆ. ಅವರ ಪಾತ್ರಗಳು ಕಡೆಗೆ ಶಕ್ತಿಶಾಲಿ ಮಹಿಳೆಯರಾಗಿ ಹೊರಬರುತ್ತವೆ. ಉದ್ಯೋಗಸ್ಥ ಮಹಿಳೆಯರು ಹೊರಗೆ – ಒಳಗೆ ಎದುರಿಸುವ ಆತಂಕಗಳನ್ನು ಅವರು ಚಿತ್ರಿಸುತ್ತಾರೆ. ವಿಭಿನ್ನ ವಯೋಮಾನಗಳ ಸ್ತ್ರೀಯರ ಮನಸ್ಸನ್ನು ಸೆರೆಹಿಡಿಯುವಲ್ಲಿ ಅವರು ಯಶಸ್ವಿಯಾಗಿದ್ದಾರೆ. ಎಳೆಯ ಪ್ರಾಯದ ಹುಡುಗಿ ತನ್ನ ತಂದೆ ತಾಯಿಗಳ ಸಂಕೋಲೆಯಿಂದ ಬಿಡುಗಡೆಗೊಳ್ಳಲು ಯತ್ನಿಸಿದರೆ, ವಿವಾಹಿತ ಹೆಣ್ಣು ಅಲ್ಲಿ ಹೆಂಡತಿಯಾಗಿ, ತಾಯಿಯಾಗಿ, ದಾಸಿಯಾಗಿ ಇರಬೇಕಾದ ಚೌಕಟ್ಟನ್ನು ನಿರ್ಮಿಸಿದ್ದಾರೆ. ಅನಂತರ ಮನೆಯ ಹೊಸ್ತಿಲು ದಾಟಿ ಆರ್ಥಿಕವಾಗಿ ಸ್ವತಂತ್ರಳಾದರೂ ಅಲ್ಲಿಕೂಡ ಅವಳು ಲಿಂಗಭೇದ ನೀತಿಯನ್ನು ಎದುರಿಸಬೇಕಾಗುತ್ತದೆ. ಈ ಸ್ಥಿತಿಯು ಅವಳನ್ನು ಸ್ವಲ್ಪ ಕಾಲ ಅಸ್ವಸ್ಥಳನ್ನಾಗಿ ಮಾಡಿದರೂ ಅವಳು ಸ್ವ ಸಂರಕ್ಷಣಾ ಶಕ್ತಿಯನ್ನು ಬಳಸಿ ಅವುಗಳಿಂದ ಹೊರಬರುವಲ್ಲಿ ಯಶಸ್ವಿಯಾಗುತ್ತಾಳೆ. ಇದನ್ನು ಅವರು ಕನಸುಗಳನ್ನು ಬಳಸುವುದರ ಮೂಲಕ ಸಾಧಿಸುತ್ತಾರೆ.

ಕಮಲಾ ಮಾರ್ಕಂಡೇಯ, ಅನಿತಾ ದೇಸಾಯಿ, ಶಶಿ ದೇಶಪಾಂಡೆ ವಿಭಿನ್ನ ವರ್ಗದ ಸಾಂಸ್ಕೃತಿಕ ದೃಷ್ಟಿಕೋನಗಳನ್ನು ತಮ್ಮ ಕೃತಿಗಳಲ್ಲಿ ಅಭಿವ್ಯಕ್ತಿಗೊಳಿಸಿದ್ದಾರೆ. ಪುರುಷ ಪ್ರಧಾನವೆಂಬ ಮಿಥಿಕವನ್ನು ಮೇಲಿನ ಲೇಖಕಿಯರು ತಮ್ಮ ಕೃತಿಗಳ ಸ್ತ್ರೀಪಾತ್ರಗಳ ಮೂಲಕ ಯಶಸ್ವಿಯಾಗಿ ಭಗ್ನಗೊಳಿಸಿದ್ದಾರೆ.

*[ಕೃಪೆ : ಮುನ್ನುಡಿ– Indian women novelists– Jyoti singh & Feminism and the post-modern Indian novelists –Anita Myles ]*

❑

## ದಾಂಪತ್ಯ

ಮನದ ಭಾವಣೆಯಲ್ಲಿ ಬಿರುಕುಗಳು
ಬಾಳಿನ ಹಾದಿಯಲ್ಲಿ ಮುಳ್ಳುಗಳು
ಶಾರೀರಿಕವಾಗಿ ನಿನಗೂ ನನಗೂ ಅಂತರ
ಹೆಜ್ಜೆಗಳೇ ಆದರೂ
ಮಾನಸಿಕವಾಗಿ ಅದೆಷ್ಟು ಅಗಾಧ
ಕೆಲಸಮಯಗಳಲ್ಲಿ ನಮ್ಮ ನಗು
ಹೂದಾನಿಯಲ್ಲಿ ಕೃತ್ರಿಮ ಹೂವು
ಹಲವು ಸಮಯಗಳಲ್ಲಿ ಮಾತುಗಳು
ಬಂದೂಕಿನ ಗುಂಡುಗಳು
ಅರ್ಥವಿಲ್ಲದ ಅಹಂಕಾರ
ವ್ಯರ್ಥವಾದ ವಾದವಿವಾದ
ಉತ್ತರ ದಕ್ಷಿಣಗಳಾಗಿ
ಬಾಳಗಾಡಿಯನ್ನು ಎಳೆಯುತ್ತಾ
ನಾಲ್ಕು ಜನದ ಎದುರು ನಾವು
ಅನ್ಯೋನ್ಯತೆಯ ಕಂಗುಬಳಿದ ವೇಷಧಾರಿಗಳು
'ಮೇಡ್ ಫಾರ್ ಈಚ್ ಅದರ್', ಮಾಸ್ಕ್ ಧಾರಿಗಳು

■ ರೋಹಿಣಿ ಸತ್ಯ



# ಗಾರ್ಮೆಂಟ್ಸ್ ಉದ್ಯಮದಲ್ಲಿ ಕಾರ್ಮಿಕರ ಶೋಷಣೆಯ ಹೊಸ ಸ್ವರೂಪಗಳು

■ಆರ್. ಪ್ರತಿಭಾ

ಬೆಂಗಳೂರಿನ ಗಾರ್ಮೆಂಟ್ಸ್ ಕಾರ್ಖಾನೆಗಳಲ್ಲಿ ದುಡಿಯುತ್ತಿರುವ ಕಾರ್ಮಿಕರು ಎದುರಿಸುವ ಸಮಸ್ಯೆಗಳು ಹಲವಾರು. ಆದರೆ ದಿನಗಳೆದಂತೆಲ್ಲಾ ಕಾರ್ಮಿಕರ ಶೋಷಣೆ ಹೊಸ ಹೊಸ ಸ್ವರೂಪ ಪಡೆದುಕೊಳ್ಳುತ್ತಿದೆ. 8 ವರ್ಷದ ಹಿಂದೆ ಇದ್ದುದಕ್ಕಿಂತ ಈಗ ಕೆಲಸದ ಸ್ಥಳದಲ್ಲಿ ಸಮಸ್ಯೆಗಳ ರೂಪ ಬದಲಾಗುತ್ತಿದೆ. ಗಾರ್ಮೆಂಟ್ಸ್ ಜಾಗತಿಕ ಉದ್ಯಮವಾದ ಕಾರಣ, ಜಾಗತಿಕ ನೆಲೆಯಲ್ಲಿ ಆದ ಬದಲಾವಣೆಗೆ ಸ್ಪಂದಿಸಿರುವ ಉದ್ಯಮವೂ ಸಹ ಅನೇಕ ಪಲ್ಲಟಗಳನ್ನು ಕಂಡಿದೆ. ಈ ಕಾರಣಕ್ಕೇ ಕಾರ್ಮಿಕರು ಹೊಸ ಹೊಸ ರೀತಿಯ ಶೋಷಣೆಗೆ ಒಳಗಾಗುತ್ತಿದ್ದಾರೆ. ಕಾರ್ಮಿಕರು ಜಾಗೃತರಾದಷ್ಟೂ ಮಾಲೀಕ ವರ್ಗವು ನೇರವಾಗಿ ಕಾನೂನಿನ ಉಲ್ಲಂಘನೆಯಾಗದಂತೆ, ತಮ್ಮದೇನೂ ತಪ್ಪು ಕಾಣದಂತೆ ಜಾಣತನದಿಂದ ಕಾರ್ಮಿಕರನ್ನು ವಿವಿಧ ರೀತಿಯಲ್ಲಿ ಶೋಷಿಸುತ್ತಿವೆ.

### ಪ್ರೊಡಕ್ಷನ್ ಒತ್ತಡ

ಗಾರ್ಮೆಂಟ್ಸ್ ಉದ್ಯಮದಲ್ಲಿ ಕಳೆದ 6-8 ವರ್ಷಗಳ ಹಿಂದಿನ ದಿನಗಳಿಗೆ ಹೋಲಿಸಿದರೆ ಈಗ ಪ್ರೊಡಕ್ಷನ್ ಒತ್ತಡ ಅತಿ ಹೆಚ್ಚಾಗಿದೆ. 2004ರಿಂದೀಚೆಗೆ ಉದ್ಯಮ ಎದುರಿಸುತ್ತಿರುವ ಪೈಪೋಟಿಯು ಕಾರ್ಮಿಕರ ಮೇಲೆ ಪ್ರೊಡಕ್ಷನ್ ರೂಪದಲ್ಲಿ ಪರಿಣಾಮ ಬೀರುತ್ತಿದೆ. ಹಿಂದೆ, ಮಹಿಳಾ ಕಾರ್ಮಿಕರು 50 – 60 ಪೀಸ್ ಪ್ರೊಡಕ್ಷನ್ ನೀಡುತ್ತಿದ್ದ ಸ್ಥಳದಲ್ಲಿ ಈಗ 160-180 ನೀಡಬೇಕಾಗಿದೆ. ಅದೇ ಯಂತ್ರ, ಅದೇ ಜನ, ಪ್ರೊಡಕ್ಷನ್ ಮಾತ್ರ 3ಪಟ್ಟು ಹೆಚ್ಚಾಗಿದೆ. ಇದನ್ನು ನಿಗದಿಪಡಿಸಲು ಯಾವುದೇ ವೈಜ್ಞಾನಿಕ ಪದ್ಧತಿಯಿಲ್ಲ. ಸಾಮಾನ್ಯ ಮನುಷ್ಯರು 8 ಗಂಟೆಯಲ್ಲಿ ಮಾಡಲು ಸಾಧ್ಯವೇ ಆಗದಂತೆ, ಅವೈಜ್ಞಾನಿಕವಾಗಿ ನಿಗದಿಪಡಿಸುವ ಈ ಪ್ರೊಡಕ್ಷನ್‌ಅನ್ನು ನೀಡಲು ಕಾರ್ಮಿಕರು ಯಂತ್ರಗಳೊಡನೆ ಯಂತ್ರಗಳಾಗಿ 8 ರಿಂದ 10 ಗಂಟೆಗಳ ಕಾಲ ಆಚೀಚೆ ನೋಡದೆ ದುಡಿಯುತ್ತಿದ್ದಾರೆ.

ಪ್ರೊಡಕ್ಷನ್ ನೀಡಲೇಬೇಕಾದ ಅನಿವಾರ್ಯತೆಯಿಂದ ಮಹಿಳಾ ಕಾರ್ಮಿಕರು ನೀರನ್ನೂ ಸಹ ಕುಡಿಯುವುದಿಲ್ಲ. ಊಟದ ಸಮಯವನ್ನೂ ಸಹ ಪೂರ್ತಿಯಾಗಿ ಬಳಸಿಕೊಳ್ಳದೆ, ಗಬಗಬನೇ ತಿಂದು ಆ ಸಮಯದಲ್ಲಿ ಕುಳಿತು ಕೆಲಸ ಮಾಡುತ್ತಾರೆ. ಕೆಲವೊಂದು ಕಾರ್ಖಾನೆಯಲ್ಲಿ ಊಟಕ್ಕೆ ಹೋಗದೆ, ಶೌಚಾಲಯಕ್ಕೆ ಹೋಗುವ ನೆಪದಲ್ಲಿ ಎದ್ದು, ಅಲ್ಲಿಯೇ ಡಬ್ಬಿ ತೆಗೆದು ತಿನ್ನುವ ಪರಿಸ್ಥಿತಿಯೂ ಇದೆ. ಇಷ್ಟಾದರೂ ಸಂಜೆ 5.30 ರ ಮೇಲೆ ಅವರು ಒಂದು ಗಂಟೆ, ಒಂದೂವರೆ ಗಂಟೆ ಹೆಚ್ಚು ಕೆಲಸಮಾಡಿ ತಮ್ಮ ದಿನದ ಪ್ರೊಡಕ್ಷನ್‌ಅನ್ನು ಮುಗಿಸುತ್ತಾರೆ. ಈ ಹೆಚ್ಚುವರಿ ಕೆಲಸಕ್ಕೆ ಅವರಿಗೆ ಯಾವುದೇ ಭತ್ಯೆಯೂ ಇಲ್ಲ. 5.30 ಕ್ಕೆ ಸರಿಯಾಗಿ ಅವರ ಕಾರ್ಡ್‌ಗಳು ಪಂಚ್ ಆಗಿರುತ್ತವೆ. ಆದರೆ ಕಾರ್ಮಿಕರು ಒಳಗೆ ಕುಳಿತು ಕೆಲಸ ಮಾಡುತ್ತಿರುತ್ತಾರೆ. ಕಾನೂನಿನ ಕೈಯಿಂದ ತಪ್ಪಿಸಿಕೊಳ್ಳುವ ಹುನ್ನಾರ ಇದು.

ಪ್ರೊಡಕ್ಷನ್ ನೆಪದಲ್ಲಿ ಮಹಿಳಾ ಕಾರ್ಮಿಕರನ್ನು ಪುರುಷ ಮೇಲಾಧಿಕಾರಿಗಳು ಶೋಷಿಸುತ್ತಿದ್ದಾರೆ. ಪ್ರೊಡಕ್ಷನ್ ಆಗಲಿಲ್ಲವೆಂದರೆ ಮಹಿಳಾ ಕಾರ್ಮಿಕರಿಗೆ ಕೆಟ್ಟದಾಗಿ, ಅಶ್ಲೀಲವಾಗಿ ಬೈಯುವುದು, ಅವಮಾನಿಸುವುದು, ಅಲ್ಲದೆ, ಕೆಲಸದಿಂದ ಕಳುಹಿಸಲೂ ಇದೇ ಕಾರಣ ನೀಡುತ್ತಿದ್ದಾರೆ. ಕಾರ್ಮಿಕರಿಗೆ ಬೇಕಾದಾಗ ರಜೆ ತೆಗೆದುಕೊಳ್ಳಲೂ ಸಹ ಈ ಕಾರ್ಮಿಕರಿಗೆ ಸ್ವಾತಂತ್ರ್ಯವಿಲ್ಲ. ಪ್ರೊಡಕ್ಷನ್ ಎಷ್ಟು ನಿಗದಿ ಪಡಿಸಬೇಕೆಂದು ಯಾವ ಕಾನೂನೂ ಹೇಳುವುದಿಲ್ಲವಾದ್ದರಿಂದ ಮಹಿಳಾ ಕಾರ್ಮಿಕರನ್ನು ಶೋಷಿಸಲು ಈ ಪ್ರೊಡಕ್ಷನ್ ಕಾರಣವನ್ನು ಆಡಳಿತ ವರ್ಗವು ಅತಿ ಸುಲಭವಾಗಿ ಬಳಸುತ್ತಿದೆ.

### ಕಾರ್ಮಿಕರ ಸಹಿತ ಕಂಪನಿಯನ್ನು ಮಾರುತ್ತಿರುವುದು

20-25 ವರ್ಷಗಳಿಂದ ಕಾರ್ಯ ನಿರ್ವಹಿಸುತ್ತಿದ್ದ ಕಾರ್ಖಾನೆಯನ್ನು ಮಾಲೀಕರು ಇದ್ದಕ್ಕಿದ್ದಂತೆ ಕಾರ್ಮಿಕರಿಗೂ ಗೊತ್ತಿಲ್ಲದಂತೆ, ಕಾರ್ಮಿಕರನ್ನೂ ಒಳಗೊಂಡಂತೆ ಬೇರೆಯವರಿಗೆ ಮಾರಾಟ ಮಾಡುವ ಮೂಲಕ ಕಾರ್ಮಿಕರನ್ನು ವಂಚಿಸುತ್ತಿದ್ದಾರೆ. ಕಾರ್ಖಾನೆಯ ದಾಖಲೆಗಳಲ್ಲಿ ಹೆಸರು ಬದಲಾವಣೆಯಾದಾಗಲೇ ಇದು ಕಾರ್ಮಿಕರ ಅರಿವಿಗೆ ಬರುತ್ತಿದೆ. ಓದು ಬರಹ ಗೊತ್ತಿಲ್ಲದ ಕಾರ್ಮಿಕರನ್ನು ವಂಚಿಸಿ, ರಾತ್ರೋರಾತ್ರಿ ಅವರಿಂದ ರಾಜೀನಾಮೆ ಪತ್ರ ತೆಗೆದುಕೊಂಡು ಅವರಿಗೆ ಸೆಟಲ್‌ಮೆಂಟ್ ಎಂದು ಅಷ್ಟೋ ಇಷ್ಟೋ ಕೊಟ್ಟು ಹೋಗುತ್ತಿದ್ದಾರೆ. ಇದರಿಂದ ಸೇವಾವಧಿಯ ಕಡಿತವಷ್ಟೇ ಅಲ್ಲದೆ, ಕಾನೂನು ಪ್ರಕಾರ ಕಾರ್ಖಾನೆ ಮುಚ್ಚಿದರೆ ಕಾರ್ಮಿಕರಿಗೆ ಸಿಗಬೇಕಾಗಿರುವ "ಮುಚ್ಚುವ ಪರಿಹಾರ"ದ ಸೌಲಭ್ಯವೂ ಸಿಗುತ್ತಿಲ್ಲ.

### ಕಾರ್ಖಾನೆಯನ್ನು ಮುಚ್ಚುತ್ತಿರುವ ಮಾಲೀಕರು

ಬೆಂಗಳೂರಿನ ಪ್ರತಿಷ್ಠಿತ ಕಂಪನಿಯೊಂದು ಹೊಸೂರು ರಸ್ತೆಯಲ್ಲಿರುವ ಹಾಗೂ ಬೆಂಗಳೂರಿನ ಇತರ ಕಡೆಯಲ್ಲಿರುವ ತನ್ನ 6 ಘಟಕಗಳನ್ನು ಮುಚ್ಚಿದೆ. ಕಾರ್ಮಿಕರೇ ಹೇಳುವಂತೆ, ಎರಡು ಮೂರು ತಿಂಗಳ ಮುಂಚೆಯೇ ಕಾರ್ಖಾನೆಯು



ಸ್ಥಳಾಂತರವಾಗುತ್ತಿದೆ ಎಂದು ಸುದ್ದಿ ಹಬ್ಬಿಸಿ, ಕಾರ್ಮಿಕರು ಸಾಮೂಹಿಕವಾಗಿ ರಾಜೀನಾಮೆ ನೀಡುವಂತೆ ಪ್ರೇರಿಸಲಾಗುತ್ತಿದೆ. ಕಾರ್ಮಿಕರು ಕೆಲಸ ಮಾಡುವಾಗಲೇ ಕಂಪನಿಯನ್ನು ಮುಚ್ಚಿದರೆ ಅವರಿಗೆ "ಮುಚ್ಚುವ ಪರಿಹಾರ"ವನ್ನು ಕೊಡಬೇಕೆಂದು ಈ ಉಪಾಯಮಾಡಿ ಅವರೇ ಸ್ವತಃ ರಾಜೀನಾಮೆ ನೀಡುವಂತೆ ಮಾಡಿ ಕಾರ್ಮಿಕರನ್ನು ವಂಚಿಸುತ್ತಿದ್ದಾರೆ.

ಇದಲ್ಲದೆ, ಕಡಿಮೆ ವೇತನಕ್ಕೆ ಕಾರ್ಮಿಕರು ಸಿಗಬೇಕೆಂಬ ಮಾಲೀಕರ ಲಾಭಕೋರತನದಿಂದಾಗಿ ಕಾರ್ಖಾನೆಗಳು ಗ್ರಾಮಾಂತರ ಪ್ರದೇಶಗಳಿಗೆ ಸ್ಥಳಾಂತರವಾಗುತ್ತಿವೆ.

**ಸಾರಿಗೆ ವ್ಯವಸ್ಥೆಯನ್ನು ಇದ್ದಕ್ಕಿದ್ದಂತೆ ನಿಲ್ಲಿಸುತ್ತಿರುವುದು**

ಕೆಲಸ ಬಹಳವಿದ್ದಾಗ ನಗರದಲ್ಲಿ ಕಾರ್ಮಿಕರ ಅಭಾವ ಇರುವುದರಿಂದ, ಮಾಲೀಕರು ಕಳೆದ ಐದು ವರ್ಷಗಳಿಂದೀಚೆಗೆ ಬೆಂಗಳೂರಿನಿಂದ 60–70 ಕಿ.ಮೀ ದೂರದಲ್ಲಿರುವ ಗ್ರಾಮಾಂತರ ಪ್ರದೇಶಗಳಿಂದ ಮಹಿಳಾ ಕಾರ್ಮಿಕರನ್ನು ತಮ್ಮದೇ ಸಾರಿಗೆ ವ್ಯವಸ್ಥೆಯ ಮೂಲಕ ಕರೆತರುತ್ತಿದ್ದಾರೆ. ಆದರೆ ತಮಗೆ ಕೆಲಸ ಕಡಿಮೆಯಾದಾಗ ಈ ಸಾರಿಗೆ ವ್ಯವಸ್ಥೆಯನ್ನು ಯಾವುದೇ ಮುನ್ಸೂಚನೆ ನೀಡದೆ ನಿಲ್ಲಿಸುತ್ತಿದ್ದಾರೆ. ಕಾರ್ಮಿಕರಿಗೆ ಕೆಲಸ ಬೇಕೆಂದರೆ ಅವರದೇ ಸಾರಿಗೆ ವ್ಯವಸ್ಥೆಯಿಂದ ಬರಬೇಕೆಂದು ಹೇಳುತ್ತಾರೆ. ಆದರೆ ಅದು ವಾಸ್ತವವಲ್ಲ ಎಂದು ಮಾಲೀಕರಿಗೆ ಕಾರ್ಮಿಕರಿಗೆ ಇಬ್ಬರಿಗೂ ಗೊತ್ತು. ತಮ್ಮ ಗ್ರಾಮಗಳಿಂದ ಸುಮಾರು 60–70 ಕಿ.ಮೀ ದೂರದಲ್ಲಿರುವ ಕಾರ್ಖಾನೆಗಳಿಗೆ ಆ ಕಾರ್ಮಿಕರು ಬರಲು ಸಾಧ್ಯವೇ ಇಲ್ಲ. ಈ ಮೂಲಕ ಮಾಲೀಕರು ತಮಗೆ ಬೇಡದ ಕಾರ್ಮಿಕರನ್ನು ಸುಲಭವಾಗಿ ನಿವಾರಿಸಿಕೊಳ್ಳುತ್ತಿದ್ದಾರೆ. ಈ ಕಾರ್ಮಿಕರು ಎರಡು ಮೂರು ವರ್ಷ ಕೆಲಸ ಮಾಡಿದ್ದರೂ ಸಹ ಅವರ ಸೇವಾವಧಿ ಕಡಿತಗೊಳ್ಳುತ್ತಿದೆ. ತಾವೇ ಕೆಲಸ ಬಿಟ್ಟವರಂತೆ ಕಾರ್ಮಿಕರು ಯಾವುದೇ ದಾರಿಯಿಲ್ಲದೆ ಹಳ್ಳಿಯಲ್ಲಿಯೇ ಉಳಿಯುತ್ತಿದ್ದಾರೆ ಮತ್ತು ನಿರುದ್ಯೋಗಿಗಳಾಗುತ್ತಿದ್ದಾರೆ.

**ಅತಿ ಕಡಿಮೆ ವೇತನ**

ಗಾರ್ಮೆಂಟ್ಸ್ ಉದ್ಯಮಕ್ಕೆ ಇಂದಿಗೂ ನಿಗದಿಯಾಗಿರುವ ಕನಿಷ್ಠ ವೇತನ ದಿನಕ್ಕೆ 157 ರೂ. ತಿಂಗಳಿಗೆ 4082 ರೂ.ಗಳಾಗುತ್ತವೆ. ಇಂದಿನ ಈ ಪರಿಸ್ಥಿತಿಯಲ್ಲಿ 4000 ರೂ.ಗಳಲ್ಲಿ ಕನಿಷ್ಠ ಗೌರವದಿಂದಲೂ ಬದುಕಲು ಸಾಧ್ಯವಾಗುವುದಿಲ್ಲ. ಗಾರ್ಮೆಂಟ್ಸ್ ಉದ್ಯಮಕ್ಕೆ ಕನಿಷ್ಠವೇತನವನ್ನು ನಿಗದಿಪಡಿಸಲಾಗಿದ್ದು ಅದನ್ನು ಪ್ರತಿ 5 ವರ್ಷದ ಒಳಗಾಗಿ ಪರಿಷ್ಕರಿಸಬೇಕು. ಆದರೆ ಕಳೆದ 9 ವರ್ಷಗಳಿಂದ ಈ ಉದ್ಯಮದ ಕನಿಷ್ಠ ವೇತನವನ್ನು ಪರಿಷ್ಕರಿಸಿರಲಿಲ್ಲ. ಕರ್ನಾಟಕ ಸರ್ಕಾರವು 2009ರಲ್ಲಿ ಈ ಉದ್ಯಮದ ಕನಿಷ್ಠ ವೇತನವನ್ನು ಪರಿಷ್ಕರಿಸಿ, ಒಂದೇ ಬಾರಿಗೆ 27 ರೂ. ಗಳನ್ನು ಹೆಚ್ಚಿಸಿತು. ಆದರೆ ಒಂದು ವರ್ಷದ ನಂತರ ಟೈಪ್ ಮಾಡುವಾಗ ತಪ್ಪಾಗಿದೆ ಎಂಬ ಕಾರಣ ನೀಡಿ, ಸರ್ಕಾರವೇ ತಾನು ಹೊರಡಿಸಿದ ಆದೇಶವನ್ನು ಹಿಂತೆಗೆದುಕೊಂಡು 5 ರೂ. ಗಳನ್ನು ಕಡಿಮೆ ಮಾಡಿ ಹೊಸ ಆದೇಶ ಹೊರಡಿಸಿತು. ಈ ಬದಲಾವಣೆ ಮಾಲೀಕ ವರ್ಗದ ಪ್ರಬಲ ಒತ್ತಡದಿಂದಲೇ ಎಂದು ಮೇಲ್ನೋಟಕ್ಕೇ ಗೊತ್ತಾಗುತ್ತದೆ. ಈ ಕಾರ್ಮಿಕರಿಗೆ ಸಿಗುವ ಅತ್ಯಲ್ಪ ಮೊತ್ತವನ್ನೂ ಸಹ ಮಾಲೀಕರು ತಮ್ಮ ಹಣಬಲದಿಂದ, ಅಧಿಕಾರ ಬಲದಿಂದ ಸಿಗದಂತೆ ಮಾಡುತ್ತಾ ಕಾರ್ಮಿಕರನ್ನು ತುಳಿಯುತ್ತಲೇ ಇದ್ದಾರೆ.

**ಮಧ್ಯದ ಆಡಳಿತ ವರ್ಗದ ದುರುದ್ದೇಶ**

ಕಾರ್ಮಿಕರು ಹೆಚ್ಚು ವರ್ಷ ಸೇವೆಯನ್ನು ಸಲ್ಲಿಸಲು ಅಲ್ಲಿನ ಕೆಲವು ಸೂಪರ್‌ವೈಸರ್‌ಗಳು, ಮ್ಯಾನೇಜರ್‌ಗಳು, ಜನರಲ್ ಮ್ಯಾನೇಜರ್‌ಗಳು ಬಿಡುತ್ತಿಲ್ಲ. ಮಾಲೀಕರು ಹಾಗೂ ಕಾರ್ಮಿಕರು ಇಬ್ಬರನ್ನೂ ತಮ್ಮ ಹಿಡಿತದಲ್ಲಿ ಇಟ್ಟುಕೊಳ್ಳಲು ಈ ಮಧ್ಯ ವ್ಯಕ್ತಿಗಳು ಬಯಸುತ್ತಿದ್ದಾರೆ. ಕಾರ್ಮಿಕರಿಗೆ ಹೆಚ್ಚು ಸೇವೆಯನ್ನು ಸಲ್ಲಿಸಲು ಅವಕಾಶ ಕೊಟ್ಟರೆ ಅವರು ತಮ್ಮ ವಿರುದ್ಧ ತಿರುಗಿಬೀಳಬಹುದು, ಆಗ ತಮ್ಮ ಅಧಿಕಾರ ಮೊಟಕಾಗಬಹುದು ಎಂಬ 'ದುರುದ್ದೇಶ'ದಿಂದ ಕಾರ್ಮಿಕರನ್ನು ವಿವಿಧ ರೀತಿಯಲ್ಲಿ ಶೋಷಿಸಿ, ಅವರು ಹೆಚ್ಚು ಅವಧಿ ಸೇವೆ ಸಲ್ಲಿಸಲು ಅವಕಾಶ ಮಾಡಿಕೊಡುತ್ತಿಲ್ಲ. ಒಬ್ಬ ಸರ್ವೀಸ್ ಆದ ಕಾರ್ಮಿಕನ ಕೆಲಸದ ಸಾಮರ್ಥ್ಯ ಹೆಚ್ಚಿರುತ್ತದೆ. ಆದರೆ ಶೋಷಣೆ ಮತ್ತು ದೌರ್ಜನ್ಯವೆಸಗುವುದರಿಂದ ಕಾರ್ಮಿಕರು ಅದೇ ಕಂಪನಿಯಲ್ಲಿ ಉಳಿಯದೇ ತಾವಾಗಿಯೇ ಕೆಲಸ ಬಿಟ್ಟು ಹೋಗುವಂತೆ ಈ ಆಡಳಿತವರ್ಗವು ಸಂಚು ಮಾಡುತ್ತಿದೆ. ಇದರಿಂದ ಕಂಪನಿಯ ಕಾರ್ಯಕ್ಷಮತೆ ಕ್ಷೀಣಿಸುತ್ತಿದೆ. ಹೊಸ ಕೆಲಸಗಾರರಿಗೆ ತರಬೇತಿ ನೀಡುವಂತಾಗುತ್ತಿದೆ.

ದಿನವೆಲ್ಲಾ ಕಷ್ಟ ಪಟ್ಟು ದುಡಿಯುವ ಕಾರ್ಮಿಕರಿಗೆ 3 ರಿಂದ 4 ಸಾವಿರ ಸಂಬಳ ನೀಡಲು ಹಿಂದೆಮುಂದೆ ನೋಡುವ ಮಾಲೀಕರು, ಸೂಪರ್‌ವೈಸರ್, ಪ್ರೊಡಕ್ಷನ್ ಮ್ಯಾನೇಜರ್, ಜನರಲ್ ಮ್ಯಾನೇಜರ್, ಇಂತಹ ಮಧ್ಯದ ಆಡಳಿತವರ್ಗಕ್ಕೆ ತಿಂಗಳಿಗೆ 10 ಸಾವಿರದಿಂದ 5 ಲಕ್ಷದವರೆಗೆ ಸಂಬಳ ನೀಡುತ್ತಿದ್ದಾರೆ. ಅಲ್ಲದೆ ಅವರಿಗೆ ವಿಶೇಷ ಭತ್ಯೆಗಳೂ ಸಹ ಸಿಗುತ್ತವೆ. ಒಂದೇ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿರುವ ಕಾರ್ಮಿಕರಿಗೂ ಈ ಆಡಳಿತವರ್ಗಕ್ಕೂ ವೇತನದಲ್ಲಿ, ಇತರ ಸೌಲಭ್ಯದಲ್ಲಿ ಇಷ್ಟು ದೊಡ್ಡ ಮಟ್ಟದ ವ್ಯತ್ಯಾಸ ಇದೆ. ಅಧಿಕಾರದ ಅಹಂಕಾರದಿಂದ, ದುಡ್ಡಿನ ಬಲದಿಂದ ಬಡ ಮಹಿಳಾ ಕಾರ್ಮಿಕರನ್ನು ಈ ಬಲಿಷ್ಠ ಆಡಳಿತವರ್ಗವು ನಾನಾ ರೀತಿಯಲ್ಲಿ ಶೋಷಿಸುತ್ತಿದೆ. ❑

## ▮ ಮಾನಸ ವೇದಿಕೆಯ ಆಹ್ವಾನ ▮

ಚರ್ಚೆ, ವಿಚಾರ ವಿನಿಮಯ, ಆತ್ಮೀಯರ ಭೇಟಿ ಮಾನಸ ಪತ್ರಿಕೆಯ ಬಗ್ಗೆ ಸಲಹೆ ಸೂಚನೆ, ಹೊಸ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಯೋಜನೆ, ಕೊಂಚ ಹರಟೆ, ಕೊಂಚ ಕ್ಯಾಂಟೀನ್‌ಕಾಫಿಗಾಗಿ ಪ್ರತಿ ತಿಂಗಳೂ ಎರಡನೇ ಬುಧವಾರ ಸಂಜೆ 5.30 ಗಂಟೆಗೆ ಆಸಕ್ತರೆಲ್ಲರೂ ಸೇರೋಣ. ರವೀಂದ್ರ ಕಲಾಕ್ಷೇತ್ರದ ಸಂಸ ಬಯಲು ರಂಗಮಂದಿರದ ಮೆಟ್ಟಿಲುಗಳಿಗೂ ಮಾನಸ ವೇದಿಕೆಗೂ ಒಂದು ಅವಿನಾಭಾವ ಸಂಬಂಧವಿದೆ. ಮಹಿಳಾ ಧ್ವನಿಗಾಗಿ ಸಾರ್ವಜನಿಕ ಸ್ಥಳವನ್ನು ಉಪಯೋಗಿಸುವುದರ ಹಿಂದೆ ಸ್ತ್ರೀವಾದದ ಪರಿಕಲ್ಪನೆಯೂ ಇದೆ. ಈ ಸಂಬಂಧವನ್ನು ಮತ್ತಷ್ಟು ಗಟ್ಟಿಗೊಳಿಸಲು **ಅಕ್ಟೋಬರ್ 12 ಬುಧವಾರ ಸಂಜೆ** ನೀವು ಬನ್ನಿ. ನಿಮ್ಮ ಗೆಳತಿಯರನ್ನೂ ಕರೆತನ್ನಿ.

*–ಮಾನಸ ವೇದಿಕೆ*

# ಅನುಭವ ಮಂಟಪದಲ್ಲಿ ಅಕ್ಕಗಳು

■ ಕೆ. ನೀಲಾ

**ಹೆಣ್ಣು ಹೆಣ್ಣಾದಡೆ ಗಂಡಿನ ಸೂತಕ**
**ಗಂಡು ಗಂಡಾದಡೆ ಹೆಣ್ಣಿನ ಸೂತಕ**
**ಮನದ ಸೂತಕ ಹಿಂಗಿದಡೆ**
**ತನುವಿನ ಸೂತಕಕ್ಕೆ ತೆರಹುಂಟೆ?**
**ಅಯ್ಯಾ ಮೊದಲಿಲ್ಲದ ಸೂತಕಕ್ಕೆ**
**ಮರುಳಾಯಿತು ಜಗವೆಲ್ಲ ಚನ್ನಮಲ್ಲಿಕಾರ್ಜುನ**

ಮನದ ಸೂತಕ ಹಿಂಗಿಸಲು ಚರಿತ್ರೆಯಲ್ಲಿ ದಾಖಲಾದ ಹೆಜ್ಜೆ ಗುರುತುಗಳು ಅಸಂಖ್ಯ. ಎಷ್ಟೆಲ್ಲ ಜಾಡು ಹಿಡಿದು ಹೊರಟ ಹಾದಿ, ಕ್ರಮಿಸಿದ ದೂರ ನಿರಂತರ ಸಂಘರ್ಷದತ್ತ ಮುಖ ಮಾಡಿಸುತ್ತವೆ. ನಮಗೆಲ್ಲ ಸಮೂಹದೊಂದಿಗೆ ಹೆಜ್ಜೆ ಹಾಕುವುದನ್ನು ಕಲಿಸಿದ್ದು ಸತ್ಯಕ್ಕ, ಅಕ್ಕ, ಬಸವ, ಚೆನ್ನಯ್ಯ, ಅಪ್ಪಣ್ಣ ಮತ್ತು ಅನುಭವ ಮಂಟಪದಲ್ಲಿ ನೆರೆದು ಜೀವನ್ಮುಖಿ ವಚನಾನುಸಂಧಾನದಲ್ಲಿ ತೊಡಗಿರುವ ಎಲ್ಲ ಕಾಯಕ ಜೀವಿಗಳು. ನಮ್ಮ ಕಿರುಬೆರಳ ತುದಿಯಿರುವುದು ಅವರ ರಕ್ಷಣಾತ್ಮಕ ಮುಷ್ಠಿಯಲ್ಲಿ. ಜಗವ ಸುತ್ತಿ ಸುಳಿದಾಡಲು ಬೆಳಕ ಕೊಟ್ಟವರು ಇವರಂಥ ಸಂಗಾತಿಗಳು. ಅಸ್ತಿತ್ವದ ಹುಡುಕಾಟಕ್ಕಾಗಿ ಹಕ್ಕಿನ ಬದುಕಿಗಾಗಿ ಜಗದಗಲ ಮೂಡಿ ಬಂದ ಚಿಂತನೆ ಚಳವಳಿಗಳು ಮೆದುಳಿಗೊಂದು ನೆರಳಾಗಿ ಜೀವಸೆಲೆಯಾಗಿವೆ. ಎಲ್ಲವೂ ಅರಿಯಬೇಕೆನ್ನುವ ಹಂಬಲ, ವಿಮೋಚನೆಯತ್ತ ಸಾಗಬೇಕೆನ್ನುವ ಛಲವನ್ನಿಟ್ಟುಕೊಂಡು ನಮ್ಮ ಮಹಿಳೆಯರು ನಡೆಸುವ ಪ್ರಯತ್ನ ಬೆರಗು ತರುತ್ತದೆ. ಪುಟ್ಟ ಪುಟ್ಟ ಪ್ರಯತ್ನಗಳೇ ಇರಬಹುದು, ಆದರೆ ಅವು ಚರಿತ್ರೆಗೊಂದು ಮಹತ್ವ ತರುತ್ತವೆ. ಒಟ್ಟು ವಿಮೋಚನೆಯ ಸಾಗರಕ್ಕೆ ಹಳ್ಳ ನದಿಯಾಗಿ ಸೇರುತ್ತವೆ. ವಿಜ್ಞಾನ ತಂತ್ರಜ್ಞಾನಗಳು ನಭೋಮಂಡಲತ್ತ ದಾಪುಗಾಲಿಡುವಾಗಲೂ ಕರ್ಮಸಿದ್ಧಾಂತದ ಮೂಲಕ ಮಹಿಳೆಯರನ್ನು ಅಸ್ತಿತ್ವ ಇಲ್ಲದಂತೆ ಮಾಡುತ್ತಿರುವ ಈ ಹೊತ್ತಿನಲ್ಲಿ, ಭಗವದ್ಗೀತೆ ಒಪ್ಪದವರೆಲ್ಲ ದೇಶ ಬಿಟ್ಟು ಹೋಗಲಿ ಎಂದು ಪ್ರಭುತ್ವವೇ ಸಂವಿಧಾನವನ್ನು ಧಿಕ್ಕರಿಸಿ ಮಾತಾಡುತ್ತಿರುವ ಈ ಹೊತ್ತಲ್ಲಿ ಅನುಭವ ಮಂಟಪ ಹೆಚ್ಚೆಚ್ಚು ಪ್ರಸ್ತುತ ವಾಗುತ್ತದೆ. ಅನುಭವ ಮಂಟಪದ ಚಟುವಟಿಕೆಗಳು ಮತ್ತೆ ಮತ್ತೆ ನಮಗೆ ಒದಗಿ ಬರುವ ದಾರಿದೀಪವಾಗುತ್ತವೆ. ಇನ್ನಷ್ಟು ನಿಖರವಾಗಿ ಸ್ಪಷ್ಟವಾಗಿ ವೈಜ್ಞಾನಿಕ ನೆಲೆಗಟ್ಟಿನಲ್ಲಿ ಚಾರಿತ್ರಿಕ ಕಣ್ಣೋಟದಿಂದ ಸಮಗ್ರ ಬದಲಾವಣೆಗೆ ಬೇಕಾದ ಗುರಿಯಿಟ್ಟುಕೊಂಡು ಅನೇಕ ಸಂಘಟಿತ ಚಟುವಟಿಕೆಗಳು ನಡೆಯುತ್ತಿವೆ. ಆದರೆ ಈ ಎಲ್ಲ ದೊಡ್ಡ ಚಳವಳಿಗೆ ಅಂತರ್‌ಶಕ್ತಿಯಾಗಿ ನಿರಂತರ ಕೆಲಸ ಮಾಡುತ್ತಿರುವ ಇಂಥ ಪ್ರಕ್ರಿಯೆಗಳನ್ನ ಗಮನಿಸಲೇ ಬೇಕೆನಿಸುತ್ತದೆ.

ಅಂದು ಅನುಭವಮಂಟಪದಲ್ಲಿ ಪುರುಷ, ಮಹಿಳೆಯರೆಲ್ಲ ಸೇರಿ ಹಕ್ಕಿನ ಹುಡುಕಾಟಕ್ಕಾಗಿ ಚಿಂತನೆ ನಡೆಸಿದ್ದರು. **'ವೇದ ಆಗಮ ಪುರಾಣಗಳೆಲ್ಲವೂ ಕೊಟ್ಟಣವ ಕುಟ್ಟುವ ನುಚ್ಚು ತೌಡು ಕಾಣಿಭೋ'** ಎಂಬ ಸತ್ಯವನ್ನು ಎತ್ತಿ ಹಿಡಿದ ಅಕ್ಕ, **'ವೇದಕ್ಕೆ ಒರೆಯನಿಕ್ಕಿ ಶಾಸ್ತ್ರಕ್ಕೆ ನಿಗಳವನಿಕ್ಕಿ, ಆಗಮದ ಮೂಗ ಕೊಯ್ದು ಮತ್ತು ಪುರಾಣವೆಂಬುದು ಪುಂಡರಗೋಷ್ಠಿ, ಶಾಸ್ತ್ರವೆಂಬುದು ಸುಳ್ಳರ ಸಂತೆ, ತರ್ಕವೆಂಬುದು ತಗರ ಹರಟೆ'** ಎಂದು ನಿಜವ ನುಡಿದ ಶರಣಾದಿ ಪ್ರಮಥರು ನಮಗೆ ನೈಜ ಚರಿತ್ರೆಯತ್ತ ನೋಡಲು ಕಲಿಸಿದರು.

ಈ ವಿಚಾರದ ಜ್ಯೋತಿಯನ್ನೆತ್ತಿ ಹೊರಟವರಲ್ಲಿ ಇತ್ತೀಚೆಗೆ ಕಲ್ಬುರ್ಗಿಯ ಲೇಖಕಿಯರು ಪ್ರಮುಖರಾಗುತ್ತಾರೆ. ಆರು ತಿಂಗಳ ಹಿಂದೆ ತಮ್ಮ ಚಟುವಟಿಕೆ ಯನ್ನು ಆರಂಭ ಮಾಡಿದರು. ನಾನೂ ಅವರ ಸಾಲಿನಲ್ಲಿ ಮೌನವಾಗಿ ಕೂತಿದ್ದೆ. ಆಲಿಸುವುದು ನನಗೆ ಹೆಚ್ಚು ಪ್ರಿಯವಾದದ್ದು. ನಾನು ಸುಮ್ಮನೆ ಕೇಳುತಿದ್ದೆ. ಈಗಾಗಲೇ ಬರೆದು ಹೆಸರು ಮಾಡಿದವರು, ಈಗ ತಾನೆ ಬರಹಲೋಕಕ್ಕೆ ಹೆಜ್ಜೆ ಇಡುತ್ತಿರುವವರು, ಬರಹಲೋಕದಲ್ಲೊಂದು ಸುತ್ತು ಬಂದು ಚಿಂತನೆ ಚಳವಳಿ ಬೆಸೆಯದ ಹೊರತು ಅರ್ಥಪೂರ್ಣ ನಡೆ ಸಾಧ್ಯವಿಲ್ಲ ಎಂಬ ವಿಚಾರವಂತೆಯರು, ಬರೆಯಬಹುದಾದ ಬೆರಗಿಗೆ ಒಲಿದು ಬಂದವರು, ಬರಹ ದಕ್ಕಿದ ಆಪ್ಯಾಯಮಾನಕ್ಕೆ ಮರುಳಾದವರು, ಬರಹವೆಂಬ ಬೆಳಕಿಂಡಿಯಿಂದ ತಮ್ಮ ಬದುಕಿಗೊಂದು ಅರ್ಥ ಕಂಡು ಕೊಂಡವರು, ಬರಹದ ಮೂಲಕ ಜಗದಗಲ ಮುಗಿಲಗಲದ ಸಾಧ್ಯತೆಗಳನ್ನ ಪ್ರೀತಿಸುತ್ತ ಬಂದವರು ಹೀಗೆ ಯಾರೆಲ್ಲ ಗೆಳತಿಯರು ಸೇರಿದ್ದರು.

ಕಾನ್‌ಸ್ಟೇಬಲ್ಲಾಗಿ ಲಾಠಿ ಹಿಡಿದ ರೇಣುಕಾಳ ಕಣ್ಣಲ್ಲಿ ಅದು ಹೇಗೆ ಕಾವ್ಯ ಕನ್ನಿಕೆಯು ನವಿಲು ಗರಿ ಹಿಡಿದು ಕೂತಿದ್ದಳೋ ನಾನರಿಯೆ, ಮುಂದೊಮ್ಮೆ ನಮ್ಮ ಭಾಗದಲ್ಲಿ ಚೆಂದದ ಕಾವ್ಯ ಬರೆವ ತಾಖತ್ತಿರುವವಳು. ಬದುಕಿನ ಗೌಜು ಗದ್ದಲದಲ್ಲಿ ಹರಿತವಾದ ಕಾವ್ಯದ ಅಕ್ಷರಗಳನ್ನು ಎದೆಯಂಗಳದಲ್ಲಿ ಕಾಪಿಟ್ಟುಕೊಂಡವಳು ಶಹಾಪುರಿನ ಸುರಯ್ಯ ಬೇಗಂ. ವಿದ್ಯಾರ್ಥಿಯಾಗಿದ್ದಾಗ ಜಿಂದಾಬಾದ್ ಅಂದವಳು ಈಗ ಕೋರ್ಟಿನಲ್ಲಿ ಟೈಪಿನ ಕೀಲಿಮಣಿಯನ್ನು ಕಟಕಟಿಸುತ್ತಿರುವ ಸಾವಿತ್ರಿ ಕಾಂಬಳೆ ಲೋಕದ ನೋವೆಲ್ಲವನ್ನೂ ಎದೆಗಿಳಿಸಿಕೊಂಡು ಕಣ್ಣೀರಾಗಿ ಕಾವ್ಯ ಬರೆದದ್ದು. ಪಿಹೆಚ್.ಡಿ. ಮಾಡುತ್ತಲೇ, ಮಗುವಿನ ಲಾಲಿಯಲ್ಲಿ ಕರಗುತ, ಸ್ಕೂಲಿನಲ್ಲಿ ಮಕ್ಕಳ ಮನಕ್ಕೆ ಅಕ್ಷರದ ಬೀಜ ಬಿತ್ತುತ, ಮನೆಯ ಆಗು–ಹೋಗುಗಳನ್ನು ನಿಭಾಯಿಸುವ ಲವಲವಿಕೆಯ ಪರವಿನ್‌ಗೆ ಅದು ಯಾವ ಹೊತ್ತಲ್ಲಿ ಕಾವ್ಯದ ಗೆಳತಿ ಬೆರಳಿಗಿಳಿಯುತ್ತಾಳೋ ಗೊತ್ತಿಲ್ಲ. ಇನ್ನೂ ಅಚ್ಚರಿಗೊಂಡು ಕಣ್ಣರಳಿಸಿದೆ. ಶಾಂತಾ ಪಸ್ತಾಪುರೆ, ಶಶಿಕಲಾ ಗಿರಿಯಂಥ ಹಿರಿಯ ಅಕ್ಕಂದಿರು ಬದುಕಬಂಡಿ ಯನ್ನು ಹೊತ್ತು, ಸವೆದ ಭುಜಗಳನ್ನು ಮತ್ತೆ ಗಟ್ಟಿಗೊಳಿಸಿಕೊಂಡು ಒಳ–ಒಳಗೇ ತಿರುಗುಣಿಯಂತೆ ಸತಾಯಿಸಿದ ಭಾವನೆಗಳಿಗೆ ಅಕ್ಷರದ ತುತ್ತನ್ನಿಟ್ಟು ಕವನವಾಗಿಸಿರುವರು. ನೋವಿನ ಮೇಲೆ ಹೊದ್ದ ಜರಿಯ ಪರದೆ ಸರಿಸಿ ತಮ್ಮ ನೋಟ್‌ಬುಕ್ಕುಗಳನ್ನು ತುಂಬುತ, ಮುದಗೊಳ್ಳುತ ಲೇಖನಿಯೆಂಬ ತೋರುಬೆರಳಿನಿಂದ ಆನಂದ ಭಾಷ್ಪವನ್ನೂ ದು:ಖದ ಕಣ್ಣೀರನ್ನೂ ತೊಡೆಯುತ ಮತ್ತೆ ಬರಹದ ಬೆರಗಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುವ ಸುವರ್ಣಾ, ನೀಲಾಂಬಿಕಾ ಮಂಗಶೆಟ್ಟಿ ಇವರ ಆಪ್ತ ಬರವಣಿಗೆಗೆ ಭರವಸೆಯ ಬೀಜಗಳು ಮೆಲ್ಲಗೆ ಕುಡಿಯೊಡೆಯುತ್ತಿರುವುದು ಸುಳ್ಳಲ್ಲ. ನಮಗೂ ನೋವು ನಲಿವುಗಳಿವೆ, ನಮ್ಮೊಳಗೂ ಕಾವ್ಯ ಗೆಳತನಕ್ಕಾಗಿ ಸತಾಯಿಸುತ್ತಿದೆ, ಇದೋ ನೋಡಿ ನಮ್ಮ ಸ್ನೇಹದ ಸಾಕ್ಷಿ 'ಕವನ' ಎಂದು ಬರೆಯುತ್ತಿರುವ ವಿಮಲ ಶೆಟ್ಟಿ, ವಸಂತ ಸೋಳಸೆ, ನಿರ್ಮಲಾ ಸಾಲುಂಕ್ಯೆ, ಕಥನಕ್ಕೂ ಲೇಖನಕ್ಕೂ ತೊಡಗಿಸಿಕೊಂಡ ಎಲ್ಲರೊಡನೆ ಬೆರೆಯುತ ಎಲ್ಲ ಕೆಲಸಗಳಿಗೂ ಕೈಜೋಡಿಸುವ ತಿಳಿನೀರಿನಂಥ ಮನಸ್ಸಿನ ಶಾಂತಾ ಮಠ, ಹಾಗೆಯೇ ಸಂಘಟಿತ ಚಟುವಟಿಕೆಗೆ ಬೆನ್ನೆಲುಬಾಗಿ ತೊಡಗುವ ಮತ್ತು ಬರೆವ ಶಿವಗಂಗಾ ರುಮ್ಮ, ಚಿತ್ಕಳಾ ಮಠ, ಶೈಲಜಾ ಒಬ್ಬರೇ ಇಬ್ಬರೇ, ಈ ಬರಹ ಮುಗಿದ ಮೇಲಿನ ಸಭೆಗೆ ಇನ್ನಷ್ಟು ಹೆಸರುಗಳು ಸೇರಿರುತ್ತವೆ. ಇವರೆಲ್ಲರನ್ನೂ ಒಟ್ಟಿಗೆ ಆಕರ್ಷಿಸುವ ದೈತ್ಯ ಗೆಳತಿಯರನ್ನು ನೆನೆದು ಬರೆಯುವಾಗ ಕೊಂಚ ಹೆಚ್ಚೇ ಅನ್ನುವಂತೆ ಮನಸು ಬೀಗಿ ನಿಲ್ಲುತ್ತದೆ. ಬಂಗಲೆ, ಗುಡಿಸಲು, ಹಳ್ಳಿ, ಪಟ್ಟಣ, ಶಾಲೆ–ಕಾಲೇಜು, ಯುವತಿಯರು ವಯಸ್ಸಾದ ಅವ್ವಂದಿರರು ಯಾರು ಎಲ್ಲೇ ಇದ್ದರೂ ಅವರೊಳಗಿನ ಪ್ರತಿಭೆ

ಗುರುತಿಸುವ ಒಳಗಣ್ಣು ಪಡೆದವರು ಮೀನಾಕ್ಷಿ ಬಾಳಿ, ನೀಲಾಂಬಿಕಾ ಪೋಲೀಸ್ ಪಾಟೀಲ, ಶಾಂತಾ ಮಠ ಮತ್ತು ಸಾರಿಕಾ ಕಾಳಗಿ. ನೀಲಾಂಬಿಕಾಳ ಜೀವತಂತು ಹೆಣೆದುಕೊಂಡಿದ್ದು ಶರಣರ ನಾಡಾದ ಬಸವಕಲ್ಯಾಣದ ನೆಲದೊಂದಿಗೆ. ಅಂದರೆ ವಚನ ಚಳವಳಿಯೊಂದಿಗೆ. ಸ್ವಾಭಿಮಾನದ ಬಾವುಟ ಎತ್ತಿಹಿಡಿಯುವಲ್ಲಿ ನೀಲಾಂಬಿಕಾಗಿರುವ ಹುಮ್ಮಸ್ಸು ಛಲ ಧೀಮಂತಿಕೆಗೆ ಹೃದಯ ವ್ವಾ ಅನ್ನದೇ ಗತ್ಯಂತರವೇ ಇರುವುದಿಲ್ಲ. ಚಿಕ್ಕವಳಿದ್ದಾಗಲೇ ಬರೆದು ಋಷಿಯ ಗಿಲಕಿ ಸದ್ದು ಕೇಳಿಸಿದ್ದ ಕಾವ್ಯಶ್ರೀ ಮಹಾಗಾಂವಕರ್ ಕೆಲವು ವರ್ಷಗಳ ದೀರ್ಘ ಮೌನ ಮುರಿದು ಮತ್ತೀಗ ಲೇಖನಿಯನ್ನು ಪ್ರೀತಿಸುತ್ತಿರುವುದು ಹೆಮ್ಮೆಯೇ ಹೌದು. ನೀಲಾಂಬಿಕಾ, ಮೀನಾಕ್ಷಿ, ಸಾರಿಕಾ ಮತ್ತು ಶಾಂತಾ ಮಠ ಮತ್ತೆಲ್ಲ ಇವರುಗಳ ನಡೆ ನುಡಿಯು ಕರುಳ ಬಳ್ಳಿಯ ಸಂಬಂಧವನ್ನು ಧ್ವನಿಸುತ್ತದೆ. ಎಷ್ಟು ದೀರ್ಘ ಇತಿಹಾಸವಿದೆ ಇಂತಹ ಧ್ವನಿಗೆ..... 'ಸಕಲ ಜೀವಾತ್ಮರಿಗೆ ಲೇಸ ಬಯಸುವವನೇ ಶರಣ' ಎಂದು ಬಸವಣ್ಣ ಹೇಳಿದರೆ, 'ನೊಂದವರ ಕಣ್ಣೀರ ತೊಡೆದು ಅವರಿಗಾಗಿ ಮಿಡಿದರೆ ನೀ ನನ್ನ ಸಂಗಾತಿ' ಎಂದು ಜಗದ ನಂಟು ಬೆಸೆದ ಚೇ ಗುವೇರಾ...... ಎತ್ತಣಿಂದೆತ್ತ ಸಂಬಂಧವಯ್ಯ ಅನಿಸುವುದಿಲ್ಲ ಮನಸಿಗೆ ಬದಲಿಗೆ ಪರಸ್ಪರ ಸಮಾನ ಮನಸ್ಕರ ಬಾಂಧವ್ಯ ಬಳ್ಳಿಯನ್ನು ಹಬ್ಬಿಸುತ್ತದೆ. ಹೆಣಿಕೆ ಕುಣಿಕೆ ಬಿಗಿಯಾಗಿಸುತ್ತದೆ. ಸಾರಿಕಾಳ ಅದ್ಭುತ ಸಂಘಟನಾ ಕೌಶಲ್ಯಕ್ಕೆ ಮನಮೆಚ್ಚಿ ಅಹುದಹುದೆನ್ನಲೇಬೇಕಾದದ್ದು. ಇನ್ನಷ್ಟು ಅಲ್ಲಲ್ಲಿ ಎಲೆಮರೆಯಲ್ಲಿ ಇರುವ ಹೂಗಳ ತಲಾಶಿನಲ್ಲಿ ಇರುವ ಇವರು ಖಂಡಿತ ದಣಿವರಿಯದ ಗೆಳತಿಯರು. ಗೋಲು ಸಭೆಯಲ್ಲಿ ಸಾಗರದೊಂದು ಹನಿಯಾಗಿ ಕೂತಿದ್ದೆ.

ಇವರು ಸಭೆ ಆರಂಭ ಮಾಡಿದ ಪರಿ ನೀವುಗಳು ಚಿತ್ತವಿಟ್ಟು ಗಮನಿಸಲೇಬೇಕು. ಮನುಸ್ಮೃತಿ ಅಧ್ಯಯನದ ಮೂಲಕ ಸಂಘಟನೆಯ ನಡೆ ಮೊದಲಿಟ್ಟಿತು. ಮುಗಿವವರೆಗೂ ಮುಂದುವರಿಸುವುದು ಅವರ ನಿರ್ಣಯ. ಸರಿ. ಸುರುವಾಯಿತು. ಬ್ರಹ್ಮನೇ ಸೃಷ್ಟಿಸಿದ(!) ವರ್ಣ ವ್ಯವಸ್ಥೆಯಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಹಾಗೂ ಒಟ್ಟೂ ಸ್ತ್ರೀಯರು ಪಾಲಿಸಬೇಕಾದ ನಿಯಮಗಳನ್ನು ವಿವರಿಸಿರುವುದನ್ನು ಓದತೊಡಗಿದರು. ಅಲ್ಲಿವರೆಗೂ ಮನುಸ್ಮೃತಿಯಲ್ಲಿ ಮಾನವೀಯ ಮೌಲ್ಯಗಳಿವೆ ಎಂದು ನಂಬಿರುವ ಮತ್ತು ಈ ಜಗತ್ತಿನ ದಲಿತತ್ವಕ್ಕೆ ಮೊದಲು ಭಾಜನರಾಗಿರುವ ಮಹಿಳೆಯರು ಕ್ರಮೇಣ ತಲ್ಲಣಿಸತೊಡಗಿದರು. 'ಸ್ತ್ರೀ ಜನ್ಮ ಜಾತೇ ಚಂಚಲೇ' ಎಂದು ಬರೆದಿರುವುದು ಅವರನ್ನು ಕೆರಳಿಸಿತು.

**ಏವಂ ಸ್ವಭಾವಂ ಜ್ಞಾತ್ವಾಸಾಂ ಪ್ರಜಾಪತಿನಿಸರ್ಗಜಂ**
**ಪರಮಂ ಯತ್ನಮಾತಿಷ್ಯೇತ್ಪುರುಷೋ ರಕ್ಷಣಂ ಪ್ರತಿ**

ಅಂದರೆ ನಿಸರ್ಗಸಹಜವಾಗಿ ಇರುವ ಸ್ತ್ರೀಯರ ಈ ಚಂಚಲ ಸ್ವಭಾವವನ್ನು ಅರ್ಥ ಮಾಡಿಕೊಂಡು ಪುರುಷನು ಸ್ತ್ರೀ ರಕ್ಷಣೆಯಲ್ಲಿ ವಿಶೇಷವಾಗಿ ಪ್ರಯತ್ನಿಸತಕ್ಕದ್ದು.

ಓದು ಮುಂದುವರಿಯತೊಡಗಿತು. ಕುಳಿತವರಲ್ಲಿ ಕೆಲವರು ಕನಲುತ 'ಕಟ್ಕೊಂಡಾಕಿ ಇದ್ದರನೂ ಹತ್ತ ಕಡಿಗಿ ಸರಗ್ಯಾಡಿ ಬರಾ ಗಂಡಸ ಮಕ್ಕಳು ಕಂಡಿಲ್ಲೇನು ಇವರಿಗಿ?' ಗೊಣಗಿದರು.

ಇನ್ನೊಂದು ಶ್ಲೋಕ;

**ಶಯ್ಯಾ ಸನಮಲಂಕಾರಂ ಕಾಮಂ ಕ್ರೋಧಮನಾರ್ಜವಂ**
**ದ್ರೋಹಭಾವಂ ಕುಚರ್ಯಾಂ ಚ ಸ್ತ್ರೀಭ್ಯೋ ಮನುರಕಲ್ಪಯತ್**

ಶಯ್ಯಾ ಆಸನ ಅಲಂಕಾರ ಇವುಗಳ ಮೋಹ, ಕಾಮ, ಕ್ರೋಧ, ಅಪ್ರಮಾಣಿಕತೆ, ಪತಿದ್ರೋಹ ಮತ್ತು ದುರ್ನಡತೆ ಇವು ಸಾಮಾನ್ಯವಾಗಿ ಸ್ತ್ರೀಯರಲ್ಲಿರುವ ಸ್ವಾಭಾವಿಕ ಗುಣಗಳೆಂದು ಮನುವು ಹೇಳುತ್ತಾನೆ.

ಅಲ್ಲಿವರೆಗೂ ಸುಮ್ಮನೇ ಕೇಳುತ ಕುಂತವಳು ಒಬ್ಬಳು ಎದ್ದು ನಿಂತು "ಯಾಂವರೀ ಅಕ್ಕಾರೆ ಅಂವ 'ಮನು' ಅಂಬಾಂವ. ಅಂವನಿಗಿ ಯಾರು ಪರವಾನಿಗಿ ಕೊಟ್ಟರು ನಮ್ಮ ಬಗ್ಗೆ ಬರಿಲಾಕ? ಅದುನೂ ಸುಳ್ಳ ಬರಿತಾನ ಅಂದರ ಹ್ಯಾಂಗರಿ? ನೀವು ಓದಿ ಬರದ ಮಂದಿ ಸುಮ್ಮನ ಹ್ಯಾಂಗ ಕುಂತಿರಿ? ನಾವ್ ಅಂದರ ಕಣ್ಣ ಇಲ್ಲದ ಕುಡ್ಡರಿದ್ದಾಂಗ. ಓದಿಲ್ಲ, ಅದಕ್ಕ ಏನಂತ ಗೊತ್ತಾಗಿಲ್ಲ. ನೀವ್ ಓದ್‌ದವರು. ನಿಮಗೇನು ಸ್ವಾಭಿಮಾನನೇ ಇಲ್ಲ?" ಅಂತ ಥೇಟ ಜಗಳಕ್ಕೆ ನಿಂತಳು.

ಅಷ್ಟರಲ್ಲಿ ಅನೇಕ ಮಹಿಳೆಯರು ಲೆಕ್ಚರರಿದ್ದವರು ಸಹ 'ಹೇ ತಾವು ಸುಮ್ಮನೇ ಅಲ್ಲೊಂದು ಇಲ್ಲೊಂದು ಶ್ಲೋಕ ಕಿಂವಿಲಿ ಕೇಳಿದ್ದನ್ನು ಮಾತ್ರ ಭಾಷಣದಾಗ ಹೇಳ್ತಿದ್ದೇವು. ಪೂರಾ ಪುಸ್ತಕ ಓದಿದ್ದಿಲ್ಲ. ಇಷ್ಟೆಲ್ಲ ಕೆಟ್ಟದಾಗಿ ಹೆಣಮಕ್ಕಳ ಬಗ್ಗೆ ಬರದಾನಲ್ಲರಿ. ಇನ್ ಮುಂದೆ ಸುಮ್ಮನ ಇರಂಗಿಲ್ಲ ಬಿಡ್ರಿ.' ಅಂತ ಎತ್ತರದ ಕಂಠದಲ್ಲಿ ಪ್ರತಿರೋಧಿಸತೊಡಗಿದರು.

ಶ್ಲೋಕ ಓದುತ್ತಿರುವ ಮೀನಾಕ್ಷಿಯು,

'ಜರಾ ಹಂಗೆ ಮುಂದಕ್ಕ ಕೇಳ್ರಿ...... ಹಿಂಗ ಒಮ್ಮೆಲೆ ತಿರುಗಿ ನಿಂತ್ರ ಹ್ಯಾಂಗ?' ಅಂದು ಎಲ್ಲರನ್ನೂ ಸುಮ್ಮನೇ ಕೂರಿಸಿ ಮುಂದುವರೆದು ಹೇಳತೊಡಗಿದಳು,

ಈ ಪ್ರಕಾರವಾಗಿ ಸ್ತ್ರೀಯರು ಸಾಮಾನ್ಯವಾಗಿ ಚಂಚಲಚಿತ್ತವುಳ್ಳವರು ವ್ಯಭಿಚಾರ ಮನಸ್ಕರು ಎಂಬುದರ ಬಗ್ಗೆ ವೇದಗಳಲ್ಲಿಯೇ ಅನೇಕ ಪ್ರಮಾಣಗಳಿವೆ. ಅವರ ವ್ಯಭಿಚಾರ ಸ್ವಭಾವದ ಲಕ್ಷಣಗಳನ್ನು ಹಾಗೂ ಆ ವ್ಯಭಿಚಾರವೆಂಬ ಪಾಪಕ್ಕೆ ಪ್ರಾಯಶ್ಚಿತ್ತ ವಿಧಿಸಲಾಗಿದೆ. ಅವಳು ಮುಂದೆ ನರಿಯಾಗಿ ಹುಟ್ಟುವಳು. ಕುಷ್ಠ ಮುಂತಾದ ಪಾಪರೋಗಗಳಿಂದ ಪೀಡಿತಳಾಗುತ್ತಾಳೆ.......

ಇನ್ನೂ ಓದುತ್ತಿರುವಾಗಲೇ ಒಬ್ಬಳು 'ಅಲ್ರಿ ಬಾಬಾ ಸಾಹೇಬರು ಈ ಪುಸ್ತಕ ಯಾವಾಗ ಸುಟ್ಟರು ಹೇಳ್ರಿ?' ಕೇಳಿದಳು.

'1927ರಲ್ಲಿ ಸುಟ್ಟರು. ಯಾಕೀಗ?'

'ನೀವು ಸಂಘದೋರು ಯಾವಾಗರೇ ಸುಟ್ಟೀರೇನು?'

'ಹೌದು. ಆರು ವರ್ಷದ ಹಿಂದ ಇದೇ ನಡುಬೀದ್ಯಾಗ ಎಲ್ಲರ ಸಮ್ಮುಖದಾಗ ಮೆರವಣಿಗಿ ಮಾಡಿ ಸುಟ್ಟಿವಿ.'

ಅದಕ್ಕವಳು, 'ಹಂಗಾರ ಈ ಪುಸ್ತಕ ಬರದವರ ಮನಸು ಎಂಥ ವ್ಯಭಿಚಾರದಿಂದ ಕೂಡಿತ್ತು ಅಂತ ಹೇಳಿ ಮತ್ತ ಸುಡಾಣರೀ' ಅಂದಳು. ಅಷ್ಟರಲ್ಲಿ ಇನ್ನೊಬ್ಬಳು "ಅಲ್ರೀ 'ಮನುಸ್ಮೃತಿಯಲ್ಲಿರುವ ಮಾನವೀಯ ಮೌಲ್ಯಗಳು' ಅಂತ ರಾಮಾ ಜೋಯಿಸ ಅಂಬವರು ಬರದಾರಲ್ಲ?" ಪ್ರಶ್ನೆ ಕೇಳಿದಳು. 'ರಾಮಾ ಜೋಯಿಸನೂ ಮನು ನಂಥವನೇ ಇರಬೇಕು ಬಿಡ್ರಿ. ಈ ಪುಸ್ತಕದಾಗ ಮಾನವೀಯ ಮೌಲ್ಯ ಹುಡಕಲಾಕ ಯಾವ ದುರ್ಬಿನ್ ಹಿಡದಾನಂತ......?' ಅದಕ್ಕೊಂದು ಉತ್ತರ ಥಟ್ಟಂತ ಬಂತು. 'ಇರಲಿ ಮೊದಲು ಪೂರಾ ಪುಸ್ತಕ ಓದೋಣ. ಆಮ್ಯಾಲ ಪೂರಾ ಟೀಕಾ ಮಾಡೋಣ.....' ಓದು ಮುಂದುವರಿಯಿತು.

ಮನುಸ್ಮೃತಿ ಪಾರಾಯಣವು ಹೀಗೆ ಪುಸ್ತಕ ಮುಗಿಯುವವರೆಗೂ ನಡೆದು ಕೊನೆಯಲ್ಲಿ ಮನುಸ್ಮೃತಿ ಪುಸ್ತಕವನ್ನು ಧಿಕ್ಕರಿಸುವುದು ಮಾತ್ರವಲ್ಲ, ಸಮಾಜ ಆಳುತ್ತಿರುವ ಅವೇ ಮೌಲ್ಯಗಳ ವಿರುದ್ಧ ಲೇಖನಿ ಬಳಸಲು ತೀರ್ಮಾನ ಮಾಡಿದರು. ಆಗ "ನಾನೇಕೆ ಬರೆಯುತ್ತೇನೆ ?" ಎಂಬ ಲೇಖನಗಳು ಒಟ್ಟಾಗತೊಡಗಿದವು. ಪ್ರತಿ ಲೇಖನದಲ್ಲಿ ಮಹಿಳೆಯರು ತಮ್ಮ ನೈಜ ಅನಿಸಿಕೆಗಳನ್ನು ದಾಖಲಿಸತೊಡಗಿದರು. ಚಿಂತನೆ-ಚಳವಳಿ ಜೊತೆಯಾಗಿಯೇ ನಡೆಯಬೇಕಾದ ಜರೂರಿ ಇರುವ ಈ ಹೊತ್ತಲ್ಲಿ ಈ ಹೆಣ್ಣುಮಕ್ಕಳ ಪ್ರಯತ್ನವು ಹೋರಾಟದ ಸಾಗರ ಸೇರುವ ಹಳ್ಳ ನದಿಯಂತೆ ಭಾಸವಾಗುವುದಿಲ್ಲವೇ?

...ಎರಡು ದಿನಗಳ ಕಾರ್ಯಾಗಾರ ನಡೆಸುತ್ತಿರುವ ಕಾರಣವಾಗಿ ಈ ಬರಹ ಮುಂದುವರೆಯಲು ಮಹಿಳೆಯರು ಅವಕಾಶ ಒದಗಿಸಿರುವರು. ಹಾಗಾಗಿ ಲೇಖನ ಮುಂದುವರಿಯುವುದು. ❑



# ಮರುರೂಪಣೆಯ ವಿಭಿನ್ನ ಸ್ತರಗಳು

■ಸಬಿತಾ ಬನ್ನಾಡಿ

ತನ್ನ ನಂತರದ ತಲೆಮಾರಿನವರನ್ನು ತೀವ್ರವಾಗಿ ಪ್ರಭಾವಿಸಿದ ಕೆಲವೇ ಕೆಲವು ಸಾಹಿತ್ಯ ಪ್ರತಿಭೆಗಳಲ್ಲಿ ಕುವೆಂಪು ಪ್ರಮುಖರು. ಕುವೆಂಪು ಅವರ ಸಮಗ್ರ ಸಾಹಿತ್ಯ ಶರಧಿಯನ್ನು ಗಮನಿಸಿದಾಗ ಅದರಲ್ಲಿ ನಾನಾತರದ ವಸ್ತು ವಿನ್ಯಾಸಗಳು, ಪ್ರಯೋಗಗಳು ಕಾಣುತ್ತವೆ. ಅವರೇ ಒಂದೆಡೆ ಹೇಳಿದಂತೆ, ಅವರದು ಸಕಾಲ ಸಾಹಿತ್ಯವೂ ಹೌದು, ತ್ರಿಕಾಲ ಸಾಹಿತ್ಯವೂ ಹೌದು. ಕೆಲವೇ ಕೆಲವು ಸಕಾಲವಷ್ಟೇ. ಆದರೆ, ಹೆಚ್ಚಿನವು ಸಕಾಲವೂ ತ್ರಿಕಾಲವೂ ಆಗಿವೆ.

ಬದುಕನ್ನೂ ಸಾಹಿತ್ಯಸೃಷ್ಟಿಯನ್ನೂ ತಪಸ್ಸೆಂದು ಭಾವಿಸುವ ಕುವೆಂಪು 'ಇಲ್ಲಿ ಯಾವುದೂ ಮುಖ್ಯವಲ್ಲ' ಎನ್ನುತ್ತಲೇ, ಜಗತ್ತು ಯಾವುದನ್ನು ಅಮುಖ್ಯ ಎಂದು ಭಾವಿಸುತ್ತದೋ ಅದರಲ್ಲಿನ ಮಹತ್ತನ್ನು ಅನ್ವೇಷಿಸಿದವರು. ಹೀಗೆ ಅನ್ವೇಷಿಸುವಾಗ ಮಹತ್ತನ್ನೇ ಅಮಹತ್ತಾಗಿಸಿದ ವ್ಯವಸ್ಥೆ, ಸಾಹಿತ್ಯದ ಕುರಿತು ಸಾತ್ವಿಕ ಸಿಟ್ಟನ್ನು ಹೊರಹಾಕುತ್ತಲೇ, ಆ ಮಹತ್ತನ್ನು ನೋಡುವ ಬಗೆಯನ್ನು ಸಾಕ್ಷಾತ್ಕರಿಸಿದವರು. ಅಂದರೆ, ಇಂತಹ ಸಂದರ್ಭಗಳಲ್ಲೆಲ್ಲಾ ಕುವೆಂಪು ಗಮನ ಆ ಚಿಂತನೆಗಳನ್ನು ಮರುರೂಪಿಸುವುದರ ಕಡೆಗೆ, ಹೊಸ ಚಿಂತನೆಗಳನ್ನು ಕಟ್ಟುವುದರ ಕಡೆಗೆ ಇದೆ.

ಹೀಗೆ ಮಾಡುವುದಕ್ಕಾಗಿ ಕುವೆಂಪು ಸಿದ್ಧತೆ ಮಾತ್ರ ಅಪಾರ. ಉಪನಿಷತ್ ಮತ್ತು ರಾಮಕೃಷ್ಣ ಪರಮಹಂಸರ ಪ್ರಭಾವ ಕುವೆಂಪು ಮೇಲೆ ಮೇಲ್ನೋಟಕ್ಕೆ ಗೋಚರವಾಗುತ್ತದಾದರೂ, ಇದಲ್ಲದೇ ಸಂಸ್ಕೃತ ಸಾಹಿತ್ಯದ ಓದು ಮತ್ತು ಮರು ಅರ್ಥೈಸುವಿಕೆ, ಆ ಕಾಲದ ಇಂಗ್ಲಿಷ್ ಸಾಹಿತ್ಯದ ಓದು ಮತ್ತು ಹೊಸನೋಟದ ಆಹ್ವಾನಿಸುವಿಕೆ, ಅಲ್ಲದೆ ಆ ಕಾಲಘಟ್ಟದಲ್ಲಿ ಜಾಗತಿಕ ಮಟ್ಟದಲ್ಲಿ ನಡೆಯುತ್ತಿದ್ದ ಜಾಗತಿಕ ರಾಜಕೀಯ ವಿದ್ಯಮಾನಗಳ ಸೂಕ್ಷ್ಮ ಅವಲೋಕನಗಳಿಂದ ಅವರು ತಳೆಯುವ ರಾಜಕೀಯ ನಿಲುವು ಇವೆಲ್ಲವುಗಳ ಜೊತೆ ಜೊತೆಗೇ ಅತಿ ಮುಖ್ಯವಾಗಿ ತಾನು ಹುಟ್ಟಿ ಬೆಳೆದ ಪರಿಸರದ ಸಾಮಾನ್ಯ ಮನುಷ್ಯರ ಅಸಾಮಾನ್ಯ ಪ್ರತಿಭೆಯ ಅರಿವು- ಇವುಗಳು ಕುವೆಂಪುವನ್ನು ರೂಪಿಸಿವೆ. ಈಗ ನಾವು ಕುವೆಂಪುವಿನಿಂದ ಪಡೆಯಬೇಕಾಗಿರುವುದು ಈ ನಿಲುವು ನೋಟಗಳನ್ನೇ.

ಹೀಗೆಂದ ಮಾತ್ರಕ್ಕೆ, ಕುವೆಂಪುವಿನಲ್ಲಿ ಕೇವಲ ಪರಿಪೂರ್ಣತೆಯನ್ನು ಅರಸಬೇಕೆಂದಿಲ್ಲ. ಪರಿಪೂರ್ಣತೆ ಯೆಡೆಗಿನ ಅವರ ಪಯಣದ ಹಾದಿಯನ್ನಷ್ಟೇ ಇಲ್ಲಿ ಗಮನಿಸುವ ಪ್ರಯತ್ನವೊಂದಿದೆ. ಕುವೆಂಪು ಬಳಸುವ ತಪಸ್ವಿ ಎಂಬ ಪದ ಪರಿಪೂರ್ಣತೆಯೆಡೆಗಿನ ಅವರ ಹಂಬಲವನ್ನು ಪ್ರತಿಬಿಂಬಿಸುತ್ತದೆ. ಶೂದ್ರ, ಶಿಲಾ, ಗೃಹ, ವಿದ್ಯಾರ್ಥಿ ಹೀಗೆ ಅನೇಕ ಕಡೆ ನೇರವಾಗಿ, ಜಗದ ಜಲಗಾರ, ಸಾಮಾನ್ಯಮೆ ಭವ್ಯಂ ಇತ್ಯಾದಿ ಇನ್ನೂ ಕೆಲವುಕಡೆ ಪರೋಕ್ಷವಾಗಿ ಇದನ್ನು ಕಾಣಬಹುದು. ಅವರು 'ರಾಮಾಯಣ ದರ್ಶನಂ'ನಿಂದ ಆ ದೊಡ್ಡ ಪ್ರಯತ್ನ ಆರಂಭಿಸಿ, ತಮ್ಮ 'ಮಲೆಗಳಲ್ಲಿ ಮದುಮಗಳು'ವಿನ ಹಂತದಲ್ಲಿ ಒಂದು ಆತ್ಯಂತಿಕ ನೆಲೆಗೆ ತಲುಪುತ್ತಾರೆ. ಗೊಬ್ಬರದ ಹುಳುವಿನ ವರ್ಣನೆಯನ್ನೇ ಇದಕ್ಕೊಂದು ಉದಾಹರಣೆಯನ್ನಾಗಿ ಗಮನಿಸಬಹುದು.

ಇದಕ್ಕಾಗಿ ಕುವೆಂಪು ಅವರು ಪರಂಪರೆಯ ನಂಬಿಕೆಗಳನ್ನು ಮರುರೂಪಿಸುವ ತಂತ್ರವನ್ನು ಬಳಸುತ್ತಾರೆ. ಅವರು ಶೂದ್ರತ್ವವನ್ನು, ಅಸ್ಪೃಶ್ಯತೆಯನ್ನು ಭಿನ್ನನೆಲೆಯಲ್ಲಿ ಎದುರುಗೊಳ್ಳುವ ಪ್ರಯತ್ನವನ್ನು ತಮ್ಮ ಶೂದ್ರತಪಸ್ವಿ, ಜಲಗಾರ ನಾಟಕಗಳಲ್ಲಿ ಮಾಡುತ್ತಾರೆ. ಹಾಗೆಯೇ ಸ್ತ್ರೀತ್ವವನ್ನೂ ಪರಂಪರೆಗಿಂತ ಭಿನ್ನವಾಗಿ ಕಟ್ಟುತ್ತಾರೆಯೇ ಎಂಬ ಕುತೂಹಲ ಸಹಜ. ಈ ಹಿನ್ನೆಲೆಯಲ್ಲಿ 'ವಾಲ್ಮೀಕಿಯ ಭಾಗ್ಯ' ನಾಟಕವನ್ನು ಪರಿಶೀಲಿಸಬಹುದೆನಿಸುತ್ತದೆ. ಈ ಮೂರರ ಜೊತೆಗೆ ಸಾಂದರ್ಭಿಕವಾಗಿ ಅವರ ಬೇರೆ ಬರಹಗಳನ್ನೂ ನೆನಪಿಸಿಕೊಳ್ಳಬಹುದು.

ಯಾವುದನ್ನು ಈ ಜಗತ್ತು ಕ್ಷುಲ್ಲಕ ಎನ್ನುತ್ತದೋ ಅದರ ಕಡೆಗೆ ಕುವೆಂಪುನೋಟ ಭಿನ್ನ ದಾರಿಯಿಂದ ಪ್ರವೇಶಿಸ ಬಯಸುತ್ತದೆ. ಗೊಬ್ಬರ, ಹೀರೇ ಹೂವು, ಹುಲ್ಲ ಮೇಲಿನ ಹನಿ, ಕಲ್ಕಿ, ಗುತ್ತಿಯ ನಾಯಿ, ಐತ-ಪೀಂಚಲುವಿನಲ್ಲಿ ಶಿವ-ಶಿವೆ, ಮಂಥರೆಯಲ್ಲಿ ಮಮತೆ, ಹೀಗೆ ಈ ಪಟ್ಟಿ ಮುಂದುವರಿಯುತ್ತದೆ. ಇಲ್ಲೆಲ್ಲಾ ಕುವೆಂಪು ಹುಡುಕಾಟದ ಅಂತಿಮ ಗುರಿ ಭವ್ಯತೆಯನ್ನೂ, ಔನ್ನತ್ಯವನ್ನೂ ಕಾಣುವುದೇ ಆಗಿದೆ. ಅಂದರೆ, ಔನ್ನತ್ಯವನ್ನು ಕಾಣುವುದಕ್ಕೆ ಸೂಕ್ತ ಕಾರಣಗಳಿದ್ದರೆ ಮಾತ್ರ ಕುವೆಂಪು ಅವುಗಳನ್ನು ತನ್ನ ಕೃತಿಯ ಭಾಗವನ್ನಾಗಿಸಿಕೊಳ್ಳುತ್ತಾರೆ. ಆದರೆ, ಎಲ್ಲದಕ್ಕೂ ಔನ್ನತ್ಯವನ್ನು ಆರೋಪಿಸುವುದಕ್ಕೆ ಅವರ ತಕರಾರಿದೆ. ಉದಾ: ದುರಂತದಲ್ಲೂ ಒಂದು ಔನ್ನತ್ಯವಿದ್ದಾಗ ಅದನ್ನು ಹಾಡುವುದು, ಅದರ ಕುರಿತು ಆಡುವುದನ್ನು ಒಪ್ಪುವ ಕುವೆಂಪು ಹಾಗಿಲ್ಲದಿದ್ದಲ್ಲಿ 'ದುರಂತ' ಎಂಬ ಪದ ಬಳಕೆ ಮಾಡುವುದನ್ನೂ ವಿರೋಧಿಸುತ್ತಾರೆ. ಇದಕ್ಕೆ ಅತ್ಯುತ್ತಮ ಉದಾಹರಣೆಯೆಂದರೆ, 'ಯಶೋಧರ ಚರಿತೆಯಲ್ಲಿ ಕಾಮವಿಕಾರ ನಿರೂಪಣೆಯ ಉದ್ದೇಶ' ಲೇಖನ.

ಅಮೃತಮತಿಯ ಬದುಕು ದುರಂತಮಯವಾದುದು ಎಂಬ ಮಾತನ್ನು ಹೇಳಲೂ ಅವರು ತಯಾರಿಲ್ಲ. ಅಷ್ಟು ಒಳ್ಳೆಯ ಪದವನ್ನು ಅಮೃತಮತಿಗೇಕೆ ಬಳಸಬೇಕು ಎಂದು ಅವರು ಆಕ್ಷೇಪಿಸುತ್ತಾರೆ. ಮಾತ್ರವಲ್ಲ, ವೈಪರೀತ್ಯ, ಮನಶ್ಶಾಸ್ತ್ರ ಇತ್ಯಾದಿ ಮನಶ್ಶಾಸ್ತ್ರದ ಸಹಾಯವನ್ನು ಆಕೆಯ ಪಾತ್ರನಿರ್ವಚನೆಗೆ ಬಳಸಿಕೊಳ್ಳುವುದೂ ಕುವೆಂಪು ಪ್ರಕಾರ ಅಪರಾಧ. ಅಮೃತಮತಿಯ ಕುರಿತಾದ ಅವರ ಕಠಿಣ ನಿಲುವುಗಳನ್ನು ಚರ್ಚಿಸುವ ಮೊದಲು ಇನ್ನೂ ಕೆಲವು ಪಾತ್ರಗಳ ಕುರಿತಾದ ಅವರ ನಿಲುವನ್ನು ಗಮನಿಸಿ, ಮತ್ತೆ ಅಮೃತಮತಿಗೆ ಮರಳಬಹುದೆನಿಸುತ್ತದೆ.

ಶೂದ್ರತಪಸ್ವಿ ಮತ್ತು ಜಲಗಾರನನ್ನು ಮರುರೂಪಿಸುವಲ್ಲಿನ ಅವರ ಶ್ರದ್ಧೆಯನ್ನು ಗಮನಿಸಬೇಕು.ಶೂದ್ರತಪಸ್ವಿಯಲ್ಲಿ ಶಂಬೂಕನನ್ನು ಮಾತ್ರವಲ್ಲ ರಾಮನನ್ನೂ, ಬ್ರಾಹ್ಮಣನನ್ನೂ ಅವರು ಹೊಸ ನಿಲುವಿನಿಂದ ನೋಡುತ್ತಾರೆ. ರಾಮ ಶಂಬೂಕ ವಧೆ ಮಾಡುವುದು ಸಾಧ್ಯವೇ ಇಲ್ಲ ಎಂಬುದು ಅವರ ದೃಢ ನಂಬಿಕೆ. ರಾಮನಲ್ಲಿ ರಾಜನನ್ನು ಕಾಣುವುದಕ್ಕಿಂತ ಕುಟುಂಬಪ್ರಿಯನನ್ನಾಗಿ ಚಿತ್ರಿಸಲು ಅವರು ಪ್ರಯತ್ನಿಸುತ್ತಾರೆ. ಶೂದ್ರನಾದರೇನು ಆತನೂ ತಪಸ್ವಿಯೇ ಎಂಬುದನ್ನು ಪ್ರತಿಪಾದಿಸುವುದಕ್ಕಿಂತಲೂ ಕುವೆಂಪು ಗಮನವಿರುವುದು 'ಕವಿ ಹೇಳಿದ್ದೆಲ್ಲ ಸತ್ಯ' ಎಂಬ ನಂಬಿಕೆಯನ್ನು ಅಲುಗಾಡಿಸುವುದರ ಕಡೆಗೆ.

ಶೂದ್ರತಪಸ್ವಿಗೆ ಮಾಸ್ತಿಯಿಂದ ಬಂದ ಪ್ರತಿಕ್ರಿಯೆ ಮತ್ತು ಇದಕ್ಕೆ ಕುವೆಂಪು ಅವರ ತೀಕ್ಷ್ಣ ಮಾರುತ್ತರ ಎಲ್ಲರಿಗೂ ತಿಳಿದಿರುವಂಥದೆ. ಪುರಾಣಗಳ ವಸ್ತುವನ್ನು ಹೊಸ ವಿಚಾರ ಹೇಳಲು ಬಳಸಿಕೊಳ್ಳಬಾರದು ಎಂಬ ಮಾಸ್ತಿಯವರ ಮಾತಿಗೆ ಕುವೆಂಪು ಪ್ರತಿಕ್ರಿಯೆ ಗಮನಾರ್ಹ.ಅವರು ಹೀಗೆ ಹೇಳುತ್ತಾರೆ: "ಪುರಾಣಗಳನ್ನು ಪ್ರತಿಮಾ ದೃಷ್ಟಿಯಿಂದ ನೋಡದೆ ಪ್ರತಿಕೃತಿಯ ದೃಷ್ಟಿಯಿಂದ ನೋಡಿದರೆ ಈ ತರಹದ ಅನರ್ಥ ವಿಮರ್ಶೆ

ಸಿದ್ಧವಾಗುತ್ತದೆ. ಪುರಾಣಗಳೆಂದರೆ ಸೂಕ್ಷ್ಮತರವಾದ ನಿತ್ಯ ಸತ್ಯಗಳಿಗೆ ಮಾನವಮತಿ ಕೆತ್ತಿರುವ ಸ್ಥೂಲವೂ ಸದೋಷವೂ ಆದ ಕಥಾಪ್ರತಿಮೆಗಳು. ಆದ್ದರಿಂದ ನಿತ್ಯ ಸತ್ಯಗಳಿಗೆ ಭಂಗಬಾರದಂತೆ ಆ ಕಥಾಪ್ರತಿಮೆಗಳನ್ನು ಆಯಾ ಕಾಲದ ಮನೋಧರ್ಮಕ್ಕನುಗುಣವಾಗಿ ತಮ್ಮ ತಮ್ಮ ಶಕ್ತಿ ಸಂಸ್ಕಾರ ಧೈರ್ಯದರ್ಶನಗಳ ಅಭಿವ್ಯಕ್ತಿಗೆ ಅನುಕೂಲವಾಗುವಂತೆ ಕವಿಗಳು ಮಾರ್ಪಡಿಸಿಕೊಂಡು ಸಾಹಿತ್ಯ ಸೃಷ್ಟಿಮಾಡುವುದು ಅತ್ಯಂತ ಆವಶ್ಯಕ ಎಂದು ಒತ್ತಿ ಹೇಳಬಯಸುತ್ತೇನೆ." (ಪು:198; ಸಮಗ್ರ ನಾಟಕ) ಇಲ್ಲಿ ಅವರು ಬಳಸಿರುವ 'ಸದೋಷವೂ' ಎಂಬ ಪದವನ್ನು ಗಮನಿಸ ಬೇಕು. ಈ ದೋಷವನ್ನು ಸರಿಮಾಡುವ ಜವಾಬ್ದಾರಿಯನ್ನು ಅವರು ತಮ್ಮ ಮೇಲೆ ಹೊರಿಸಿಕೊಂಡಿದ್ದಾರೆ. ಹೀಗಾಗಿ ಕುವೆಂಪು ಇಲ್ಲಿ ಕೇವಲ ಶೂದ್ರರನ್ನು ಗಮನದಲ್ಲಿಟ್ಟುಕೊಂಡಿಲ್ಲ. ಬದಲಿಗೆ, ಸಾಮಾನ್ಯರಲ್ಲಿ ಒಂದು ಭಾಗವಾಗಿರುವ, ಪರಂಪರೆಯಿಂದ ದತ್ತವಾಗಿರುವ ಬ್ರಾಹ್ಮಣಿಕೆಯ ಅಹಂಕಾರಕ್ಕೆ ಬಲಿಯಾಗಿರುವ ಅಜ್ಞಾನಿ ಬ್ರಾಹ್ಮಣನನ್ನೂ–ಹೊಸಜ್ಞಾನದ ಅರಿವುಂಟಾಗುವಂತೆ ಪರಿವರ್ತಿಸುವುದರ ಕಡೆಗೂ ಚಿಂತಿಸಿದ್ದಾರೆ.

**ಬೋಧಮಾಯ್ತೆನಗೀಗಳ್, ಮಹಾಪ್ರಾಜ್ಞ,**
**ಬುದ್ಧಿಗಲಿಸಿದಯ್ ಸಂಪ್ರದಾಯಬದ್ಧಂಗೆ,**
**ಶಾಸ್ತ್ರ ಸಂಮೂಢಂಗೆ, ಜಾತಿಗರ್ವಾಂಧಂಗೆ**

ಎಂಬ ಸಾಲುಗಳಾಗಲೀ, 'ನಮಸ್ಕರಿಸಾ ಮಹಾತಪಸ್ವಿಗೆ, ದ್ವಿಜಕುಮಾರ' ಎಂಬ ಮಾತುಗಳಾಗಲೀ ಇದನ್ನು ಪುರಸ್ಕರಿಸುತ್ತವೆ.

ಈ ನಿಟ್ಟಿನಲ್ಲಿ ಕುವೆಂಪುವಿನಲ್ಲಿ ತುಂಬಿ ತುಳುಕುವ ಆತ್ಮವಿಶ್ವಾಸಕ್ಕೆ ಅತಿ ಮುಖ್ಯಕಾರಣ, ಅವರಿಗೆ ಈ ಕುರಿತು ಇರುವ ಖಚಿತತೆ ಮಾತ್ರವಲ್ಲ–ವಾಲ್ಮೀಕಿ ರಾಮಾಯಣ ಮತ್ತು ಭವಭೂತಿಯ ರಾಮಾಯಣ ಹಾಗೂ ಸಂಸ್ಕೃತ ಸಾಹಿತ್ಯಗಳ ಆಳವಾದ ಓದೂ ಆಗಿದೆ. ತಪ್ಪಾಗಿ ಅರ್ಥೈಸಿದ್ದೀರಿ ಎಂದು 'ಸಂಸ್ಕೃತದ ವಾರಸುದಾರರಿಗೆ' ಅವರು ಕಣ್ಣಿಗೆ ಬೆರಳಿಟ್ಟು ಹೇಳಿ ಬಿಡುತ್ತಾರೆ.

ಜಲಗಾರದಲ್ಲಿ 'ಜಲಗಾರ' ಒಂದು ಆದರ್ಶಪಾತ್ರದಂತೆ ಚಿತ್ರಿತ ನಾಗಿದ್ದಾನೆ. ಆತ ಧರ್ಮದ ಬಗೆಗೆ, ದೇವರ ಬಗೆಗೆ ನಿಶಿತ ದೃಷ್ಟಿಯನ್ನು ಹೊಂದಿದವನು. ಬೂಟಾಟಿಕೆಗಳನ್ನು ಪ್ರತಿನಿಧಿಸುವ ಅನೇಕ ಸ್ತರದ ಪಾತ್ರಗಳು ಇಲ್ಲಿ ಬರುತ್ತವೆ. ಮುಗ್ಧರು, ಮೂಢರು, ಅರಿವಿದ್ದೂ ಸುಲಿಯುವ ಪುರೋಹಿತರು. ಜಾತಿ, ವರ್ಗ ವಿನಾಶದ ಮಾತನಾಡಿ ಜಾತಿ, ವರ್ಗಭೇದ ಆಚರಿಸುವವರು, ವಿದ್ಯಾವಂತರಾಗಿದ್ದೂ ಮೂರ್ಖರಾಗಿರುವವರು, ಬಡವರು, ದಮನಿತರು, ಅಸ್ಪೃಶ್ಯರು ಇತ್ಯಾದಿ. ಇಲ್ಲಿ ಅತಿ ವಾಚ್ಯವಾಗಿಯೇ ಆಶಯಗಳನ್ನು ಹೇಳಿಸಲಾಗಿದೆ. ಆದರೆ, ಜಲಗಾರನ ಬದುಕಿನಲ್ಲಿ ಯಾವುದೇ ಜಿಗಿತ(ಶಿಫ್ಟ್) ಕಾಣುವುದಿಲ್ಲ. ಶಿವ ಒಲಿಯುತ್ತಾನೆ, ಜಲಗಾರನನ್ನು ಶಿವನಲ್ಲಿ ಅಭಿನ್ನಗೊಳಿಸಲಾಗುತ್ತದೆ, ನಿಜ. ಆದರೆ ಸ್ಥಿತ್ಯಂತರ ಕಾಣುವುದಿಲ್ಲ. "ಊರ ತೋಟಿಯು ನೀನು, ಜಗದ ತೋಟಿಯು ನಾನು!" ಎಂಬಲ್ಲಿಗೆ ಕೊನೆಗಾಣುವ ಇಲ್ಲಿ ಕುವೆಂಪು ಮರುರೂಪಿಸುವುದು ಕಾಯಕದ ಬಗೆಗಿನ ಲೋಕರೂಢಿಯ ನಂಬಿಕೆಗಳನ್ನು ಮತ್ತು ಶ್ರಮಜೀವಿಯಲ್ಲೇ, ಶ್ರಮದಲ್ಲೇ ದೇವರಿದ್ದಾನೆ ಎಂಬ ಮೇಲುಸ್ತರದ ನಂಬಿಕೆಯನ್ನು ಮಾತ್ರ.

**"ಕರ್ಮವಾರಾಧನೆ, ಸೇವೆಯೇ ಪೂಜೆ**
**ನನ್ನ ಭಾಗಕೆ ಪೊರಕೆ ಆರತಿ, ಗುಡಿಸುವುದೆ**
**ನನ್ನ ದೇವರ ಪೂಜೆ!"**

ಎಂಬ ಮಾತುಗಳು ಜಲಗಾರನೆಂಬ ವ್ಯಕ್ತಿಗಿಂತಲೂ ಆತನ ಕಾಯಕದ ಔನ್ನತ್ಯವನ್ನು ಮೆರೆಸುವುದರ ಕಡೆ ಗಮನಹರಿಸುವುದರಲ್ಲಿ ಮಗ್ನವಾಗಿದೆ. ಶೂದ್ರ ತಪಸ್ವಿಯ ರೋಷ ಇಲ್ಲಿ ಕಾಣುವುದಿಲ್ಲ. ಆದರೆ, ಅಸಮಾನತೆಯ ಬಗ್ಗೆ ಅಸಮಾಧಾನವಿದೆ.



**ಭಿಲ್ಲವೇಶದ ಶಿವ – ಶರ್ವಾಣಿಯರು, ಚಿತ್ರ: ಮೋಹನ ಸಿತನೂರ್**
*(ಕುವೆಂಪು ಸಾಹಿತ್ಯಚಿತ್ರ ಸಂಪುಟದಿಂದ)*

ಮೇಲಿನ ಎರಡೂ ಸಂದರ್ಭದಲ್ಲಿ ಕುವೆಂಪುವಿನಲ್ಲಿ ಕಾಣಿಸುವ ಅಸಮಾನತೆಯ ವಿರುದ್ಧದ ತೀವ್ರತರವಾದ ಪ್ರತಿಪಾದನೆ ಹೆಣ್ಣುಮಕ್ಕಳ ವಿಚಾರದಲ್ಲಿ ಕಾಣುತ್ತದೆಯೇ ಎಂಬುದು ನನ್ನ ಇನ್ನೊಂದು ಕುತೂಹಲದ ವಿಚಾರ.

ವಾಲ್ಮೀಕಿಯ ಭಾಗ್ಯ ನಾಟಕವನ್ನೇ ನೋಡಿದರೆ, ಸೀತೆಯನ್ನು ಕಾಡಿಗೆ ಬಿಡುವ ಸಂದರ್ಭದಲ್ಲಿ ಲಕ್ಷ್ಮಣನ ಸಂಕಟ, ಸೀತೆಯ ಅಳಲು ಕಣ್ಣಿಗೆ ಕಟ್ಟುವಂತೇನೋ ಚಿತ್ರಣಗೊಂಡಿದೆ. ಲಕ್ಷ್ಮೀಶನ ಜಾಡಿನಲ್ಲೇ ಸಾಗುವ ಈ ನಾಟಕ ಕೊನೆಯಲ್ಲಿ ದುಃಖದ ತಾಪವನ್ನು ತಂಪಾಗಿಸಿ ಬಿಡುತ್ತದೆ. ತನ್ನ ಕಾವ್ಯದ ನಾಯಕಿ ಸೀತೆ ತನ್ನಾಶ್ರಮಕ್ಕೆ ಬಂದುದು ತನ್ನ ಭಾಗ್ಯ ಎಂದು ವಾಲ್ಮೀಕಿ ಸಂತಸಪಡುತ್ತಾನೆ. ಸೀತೆಯ ದುಃಖಕ್ಕೂ ಒಂದು ಮಹತ್ ಕಾರಣವಿದೆ ಎಂದು ಸಮಾಧಾನಿಸುತ್ತಾನೆ,

**ತಾಯಿ, ಮೇಲೇಳು**
**ನಿನಗೆಲ್ಲಂ ಒಳ್ಳಿತಹುದು**
**ನೀನೆನ್ನ ಮಹಾಕಾವ್ಯದ ಸವಿಗಣ್ಣಲ್ತೆ!**
**ಕಥಾನಾಯಿಕೆಯಲ್ತೆ!**
**ವಾಲ್ಮೀಕಿಯ ಭಾಗ್ಯಮಲ್ತೆ!**

ತತ್‌ಕ್ಷಣ ಹುಟ್ಟುವ ಪ್ರಶ್ನೆ 'ಸೀತೆಯ ಭಾಗ್ಯ ಯಾವುದು?' ಇಲ್ಲಿ ನಾಟಕಕಾರ ರಾಮನ ಚಿತ್ರವನ್ನಾಗಲೀ, ಸೀತೆಯ ವ್ಯಕ್ತಿತ್ವವನ್ನಾಗಲೀ ಮರುರೂಪಿಸ ಹೊರಡುವುದಿಲ್ಲ. ಬದಲಿಗೆ, ರಾಮನ ಬಗೆಗೆ ಓದುಗರ ಮನದಲ್ಲೇನಾದರೂ ಕಹಿ ಇದ್ದರೆ ಅದನ್ನು ತಿದ್ದಲು ಪ್ರಯತ್ನಿಸಿದಂತೆ ಕಾಣುತ್ತದೆ. ಅವರೇ ಹೇಳಿಕೊಂಡಂತೆ, "ಸೀತಾಪರಿತ್ಯಾಗಕ್ಕೆ ಈಗಾಗಲೇ ನೀಡಲಾಗಿರುವ ಕಾರಣಗಳಲ್ಲಿ ಕೆಲವು ಕುಂಟು, ಕೆಲವು ಕುರುಡು.... ...ಈ 'ದೃಶ್ಯ'ದಲ್ಲಿ ವಾಲ್ಮೀಕಿಯ ಭಾಗ್ಯವನ್ನು ಕಾರಣವಾಗಿ ಇಟ್ಟುಕೊಂಡಿದೆ... ಈ ಕಾರಣವನ್ನು ಹೇಳಿದುದರಿಂದ ಸೀತಾ ಪರಿತ್ಯಾಗದ ಸಮಸ್ಯೆ ಪರಿಹಾರವಾಗದಿದ್ದರೂ ಅದು ಭಾವಪೂರ್ಣ ವಾಗುವುದೆಂದು ಬರೆದವನ ಆಶಯ." (ವಿಜ್ಞಾಪನೆಯಲ್ಲಿ). ಇಲ್ಲಿ ಕುವೆಂಪು ಸೀತೆ ದುಃಖಿಯಲ್ಲ ಸುಖಿ ಎಂಬುದನ್ನು ಕಟ್ಟಲು ಪ್ರಯತ್ನಿಸು ತ್ತಿರುವಂತಿದೆ.



ಅರಣ್ಯದಲ್ಲಿ ಸೀತೆಯ ಅಡುಗೆ, ಚಿತ್ರ: ಪುರುಷೋತ್ತಮ ಅಡವೆ
*(ಕುವೆಂಪು ಸಾಹಿತ್ಯಚಿತ್ರ ಸಂಪುಟದಿಂದ)*

ಅಥವಾ ರಾಮಾಯಣದ ಕಥಾನಾಯಿಕೆಯಾಗುವುದೇ ಅವಳಿಗೊದಗುವ ಒಳಿತು ಎಂಬಂತೆ ಒಪ್ಪಿಸ ಹೊರಡುತ್ತಿರುವಂತಿದೆ.

ಈ ಯಾವ ಕಾರಣವೂ ಸೀತೆಗೆ ನ್ಯಾಯ ಒದಗಿಸದು ಎಂಬುದು ಯಾವುದೇ ಹೆಣ್ಣು ಮಕ್ಕಳ ಅಭಿಪ್ರಾಯವಾದೀತು ಎಂದು ನನಗನಿಸುತ್ತದೆ. ಪೀಂಚಲುವನ್ನು ಸೃಷ್ಟಿಸಿದ ಕುವೆಂಪು ಕುರಿತು ಇಲ್ಲಿ ದೋಷಾರೋಪಣೆ ಮಾಡುತ್ತಿಲ್ಲ. ಬದಲಿಗೆ, ಕುವೆಂಪು ಹೆಣ್ಣುಮಕ್ಕಳಲ್ಲಿ ಭವ್ಯತೆಯನ್ನು, ತ್ಯಾಗದ ಮಹತ್ತನ್ನು, ದೇವಿಯನ್ನು, ಬಾಳಿನ ಸೊಬಗನ್ನು ಕಾಣುತ್ತಾರೆ. ಮತ್ತು ಅದರಲ್ಲಿಯೇ ತೃಪ್ತರಾಗುತ್ತಾರೆ. ಆದರೆ, ಅವರು ಸೃಷ್ಟಿಸುವ 'ಮನೆ ಮನೆಯ ತಪಸ್ವಿನಿ'ಯರ ಬಿಂಬವನ್ನು ಒಡೆಯಲೇ ಬೇಕಾದ್ದು ಇಂದಿನ ಅನಿವಾರ್ಯ.

ತಮ್ಮ 'ಮಗಳಿಗೆ ಹರಕೆ' ಕವನದಲ್ಲಿ ಅವರು 'ನಿನ್ನತನವನು ನೀನು ಅವನಿಗರ್ಪಿಸುವೋಲೆ/ತನ್ನತನವನು ಅವನು ನಿನಗರ್ಪಿಸಲಿ ಬಾಲೆ' ಎಂದು ಸಮಾನತೆಯನ್ನು ಹಾರೈಸುತ್ತಾರೆ. 'ನಿನ್ನಮ್ಮನನು ನಾನು ಎಂತು ಒಲಿದೆನೊ ಅಂತೆ/ ನಿನ್ನನೊಲಿಯುವ ಇನಿಯ ನಿನಗೂ ದೊರೆಯುವಂತೆ/ಹರಕೆಗೈಯಲಿ ನಿನಗೆ ಶ್ರೀ ಜಗನ್ಮಾತೆ' ಎಂದು ಈ ಕವಿತೆ ಆರಂಭವಾಗುತ್ತದೆ. ನಿಜ. ಆದರೆ, ಎಲ್ಲರ ಕವಿತೆಗಳ ನಾಯಕ ಕುವೆಂಪು ಆಗಿರುವುದಿಲ್ಲ ಎಂಬುದೇ ವಾಸ್ತವ. ಹೀಗಾಗಿಯೇ, 'ಮನೆ ಮನೆಯ ತಪಸ್ವಿನಿಗೆ' ಕವಿತೆಯಲ್ಲಿ ಬರುವ

**ಹಿಡಿಯದಿರಲಿ ನಿನಗಾದರು**
**ಗಂಡಸರಾ ಕುತ್ತ:**
**ಪ್ರಖ್ಯಾತಿಯ ಪಡೆಯುವೊಂದು**
**ಪ್ರಾಪಂಚಿಕ ಪಿತ್ತ!**
**ಹೊಸಲಾಚೆಗೆ ನೀನೋತರೆ**
**ಹೊಸಲೀಚೆಗೆ ಬೆಳಕಿಲ್ಲ;**
**ಹೆಸರಾಸೆಗೆ ನೀ ಸೋತರೆ**
**ಉಸಿರಾಸೆಯೆ ನಮಗಿಲ್ಲ!**

ಎಂಬ ಸಾಲುಗಳು ಬೆರಳ್‌ಗೆ ಕೊರಳ್, ಗೊಬ್ಬರ, ಹೀರೇ ಹೂವಿನ ಆಶಯಗಳಿಗೆ ವಿರುದ್ಧ ನೆಲೆಯಲ್ಲಿ ನಿಲ್ಲುತ್ತವೆ. ಇಲ್ಲಿರುವ ಸೂಚನೆಗಳು ತ್ಯಾಗದ ಕಡೆಗಷ್ಟೇ ಕೈ ತೋರುತ್ತವೆ.

ಈ ಕಾರಣಗಳಿಗಾಗಿಯೇ ಕುವೆಂಪು ಅಮೃತಮತಿಯ ಕುರಿತು ಸಹಾನುಭೂತಿ ತೋರಲು ಸಾಧ್ಯವಾಗುವುದಿಲ್ಲ. ಮಾತ್ರವಲ್ಲ, ಬಹುಶಃ ಇನ್ನೆಲ್ಲೂ ಬಳಸದಷ್ಟು ರೂಕ್ಷವಾದ ಭಾಷೆಯ ಬಳಕೆಯನ್ನು ಅವರು ಅಮೃತಮತಿಗೆ ಬಳಸುತ್ತಾರೆ. ಪೊಲ್ಲಮೆಯೆ ಲೇಸು ನಲ್ಲರ ಮೈಯೊಳ್ ಎಂಬ ಮಾತಿಗೆ ಕುವೆಂಪು ಪ್ರತಿಕ್ರಿಯೆ ಹೀಗಿದೆ: **'ಎಂತಹ ಮುತ್ತಿನಂತಹ ಮಾತು, ಎಂತಹ ಹಂದಿಯ ಬಾಯಲ್ಲಿ'. 'ಆಕೆ ಪತಿತೆ ಮಾತ್ರವೇ ಅಲ್ಲ, ನೀಚೆ, ಕುಲಟೆ, ಪಾತಕಿ, ಸರ್ವಪಾಪಗಳ ಘನೀಭೂತ ಪ್ರತಿಮೆ. ಇಂತಹ ಪಾತ್ರವನ್ನು ಕುರಿತು ಅನುಕಂಪೆ ಹುಟ್ಟುವುದು ಅಸಂಭವ'** (ಪು:416). ಇಷ್ಟಾದರೂ, ಇಂದಿಗೂ ಮಹಿಳಾಕವಿಗಳು ಅಮೃತಮತಿಯ ಮೇಲೆ ಕವನ ಬರೆಯುತ್ತಲೇ ಇದ್ದಾರೆ. ಹೀಗೆ ಬರೆಯುತ್ತಾರೆಂದರೆ ಅದಕ್ಕೂ ಒಂದು ಕಾರಣವಿದ್ದೀತು ಅಲ್ಲವೇ? ಅಮೃತಮತಿಯನ್ನು ಸಮರ್ಥಿಸುವುದು ಬೇಡ. ಕೊನೆಯಪಕ್ಷ ಜನ್ನನನ್ನೊ, ಯಶೋಧರನನ್ನೋ ಹೋಗಲಿ, ಅಷ್ಟಾವಂಕನನ್ನಾದರೂ ಅನುಮಾನಿಸುವದೂ ಬೇಡವೇ? ಬಹುಶಃ ಕುವೆಂಪು ಹೆಣ್ಣು ಮಕ್ಕಳ ವಿಚಾರದಲ್ಲಿ – ಮಂಥರೆ ಮೊದಲಾದವರಲ್ಲಿ ಕಂಡರೂ–ಮರು ರೂಪಿಸುವುದಕ್ಕಿಂತ ಕೇವಲ ಕಟ್ಟುವುದರಲ್ಲಿ ಮಗ್ನರು ಅನಿಸುತ್ತದೆ. ಅವರೇ ಸಂದರ್ಶನವೊಂದರಲ್ಲಿ ಹೇಳುವ ಮಾತುಗಳು ಹೀಗಿವೆ: 'ನೋಡಿ, ಸೃಷ್ಟಿ ನಿಯಮವೇ ಹಾಗೆ. ಪೂರ್ಣದೃಷ್ಟಿಗೆ ಯಾವುದೂ ತುಚ್ಛವಲ್ಲ, ಪಾಪವಲ್ಲ, ನೀಚವಾದದ್ದು ನೀಚವಾಗಿಯೇ ಉಳಿಯುವುದಿಲ್ಲ. ಎಲ್ಲವೂ ಪರಿವರ್ತನೆಗೊಳ್ಳಲೇ ಬೇಕು. ರಾವಣ ಒಬ್ಬ ಖಳನಾಯಕ. ಆದರೆ ಇಲ್ಲಿ ಅವನು 'ಶ್ರೀ ರಾವಣ', ಮಂಥರೆಯೂ ಅಷ್ಟೆ! ಕೈಕೆ ಅಷ್ಟೆ. ಕೊನೆಗೆಲ್ಲ ಓಂ ಸಚ್ಚಿದಾನಂದ ಮಯ!' (ಪು:1137; ಸಮಗ್ರ ಗದ್ಯ ಸಂಪುಟ–2)

ಪಾತಿವ್ರತ್ಯದ ಭಂಗ, ಅಪಾತ್ರನಲ್ಲಿ ಒಲುಮೆ, ಜನ್ಮಾಂತರ ದ್ವೇಷ, ಕೊಲೆಯಲ್ಲಿ ಭಾಗಿಯಾದ ಅಮೃತಮತಿಗೆ ನರಕದ ಗತಿಯಾದದ್ದನ್ನು ಹರ್ಷದಿಂದ ಮೆಚ್ಚುವ ಕುವೆಂಪು ಈಕೆಯನ್ನೂ ಮರುರೂಪಿಸಲು ಯೋಚಿಸಬಹುದಿತ್ತೇ? ಬಹುಶಃ ಅದು ಅವರಿಗೆ ಸಾಧ್ಯವಿಲ್ಲ. ತಮ್ಮ ಸಹಧರ್ಮಿಣಿ ಕುರಿತ ಕವನವೊಂದರ ಕೆಲವು ಸಾಲುಗಳು ಹೀಗಿವೆ:

**ಜಗವನಾಳುವ ತಾಯೆ ನನ್ನನಾಳುವ ಮಾಯೆ**
**ತಾನಾಗಿ ಬಂದಿಹಳು ನನ್ನ ಜಾಯೆ!**
**ಭೂಮಿತಾನಾಗಿಯೂ ಅಲ್ಪೆತಾನೆನುವೋಲು**
**ಒಲಿದಪ್ಪಿ ಮಲಗಿಹಳು ಈ ಕೃಪಾಲು!**
**ಸೂರ್ಯ ನಕ್ಷತ್ರಾದಿ ಭೂವ್ಯೋಮ ಸಾಗರವ**
**ಮಾಡಿ ಆಡಿಪ ದಿವ್ಯೆ ಆ ಸರ್ವಶಕ್ತೆ**
**ಇಲ್ಲಿ ಅಬಲೆಯೆ ಆಗಿ, ಒಲಿದ ಹೆಂಡತಿಯಾಗಿ**
**ಮಕ್ಕಳೊಂದಿಗೆ ಚಿಕ್ಕ ಸಂಸಾರಾನುರಕ್ತೆ!**

ಇದು ಕುವೆಂಪು ನಂಬುವ, ಕಟ್ಟುವ ಹೆಣ್ಣಿನ ಚಿತ್ರ. ಇದೇ ದಿವ್ಯ ಭವ್ಯ ನೆಲೆ ಅಸ್ಪೃಶ್ಯತೆ, ಶೂದ್ರರು, ನಿರ್ಲಕ್ಷಿತ ವಿಚಾರಗಳ ಕುರಿತೂ ಅವರಿಗಿದೆ. ಆದರೆ, ಅಲ್ಲಿರುವ ಹಕ್ಕಿನ ಹೋರಾಟ ಮಾತ್ರ ಇಲ್ಲಿ ಕಾಣುವುದಿಲ್ಲ. ಸ್ತ್ರೀ ಸಮಸ್ಯೆಯನ್ನು ಅವರು ಪುರುಷನು ಪರಿಪೂರ್ಣನಾದಾಗ, ತನ್ನಷ್ಟಕ್ಕೆ ತಾನೇ ಪರಿಹಾರವಾಗುವ ವಿಚಾರ ಎಂದೇ ಭಾವಿಸುತ್ತಾರೆ. ❑




# ಬಿದಿರಿನ ಬುಟ್ಟಿ

■ ಊರ್ಮಿಳಾ ಪವಾರ್

*ಅನು: ಮಂಗ್ಳೂರ ವಿಜಯ*

*(ಹಿಂದಿನ ಸಂಚಿಕೆಯಿಂದ)*

ಎರಡು ವರ್ಷಗಳ ನಂತರ ಎಂ.ಎ ಮುಗಿಯಿತು. ದ್ವಿತೀಯ ದರ್ಜೆಯಲ್ಲಿ ಪಾಸಾಗಿದ್ದೆ. ನನ್ನ ಹೃದಯ ಸಂತೋಷದಿಂದ ತುಂಬಿ ಬಂದಿತ್ತು. ಮಕ್ಕಳೂ 'ಅಮ್ಮ ಮಾಸ್ಟರ್ ಡಿಗ್ರಿ' ಎಂದು ಕುಣಿದಾಡಿದರು. ಹರಿಶ್ಚಂದ್ರ ಮಾತ್ರ ಯಾವ ಸಂತೋಷವನ್ನೂ ವ್ಯಕ್ತಪಡಿಸಲಿಲ್ಲ. ನಾನೇ ಮೇಲೆ ಬಿದ್ದು ಸಂತೋಷ ಹಂಚಿಕೊಂಡರೆ ಆತನಿಗೆ ಇನ್ನೂ ಇರುಸು-ಮುರುಸು ಉಂಟಾದೀತೆಂದು ಭಾವಿಸಿ, ಸುಮ್ಮನಾದೆ. ಸರ್ಟಿಫಿಕೇಟ್ ಬಂದಾಗ ತೋರಿಸುತ್ತಾ, ಕೈಗಿಟ್ಟೆ. ಅದನ್ನು ಬಿಚ್ಚಿ ಸರಿಯಾಗಿ ನೋಡಲೂ ಇಲ್ಲ. ಅತನೇ ಫ್ರೇಂ ಹಾಕಿಸಿಕೊಂಡು ಬಂದು ತೂಗು ಹಾಕಿದ್ದ ನನ್ನ ಬಿ.ಎ ಸರ್ಟಿಫಿಕೇಟ್ ಕೆಳಗಿನ ಗೂಡಲ್ಲಿ ಈ ಎಂ. ಎ. ಸರ್ಟಿಫಿಕೇಟ್ ಬಿದ್ದು ಹೊರಳಾಡುತ್ತಿತ್ತು. ಒಂದೆರಡು ವಾರಗಳ ಬಳಿಕ ನಾನೇ ಅದನ್ನು ಒಯ್ದು 'ಫ್ರೇಂ' ಹಾಕಿಸಿ ಮನೆಯಲ್ಲಿ ತಂದಿಟ್ಟೆ; ತೂಗು ಹಾಕಲಿಲ್ಲ.

ಕೊಂಕಣ ಮಹಾರಾಷ್ಟ್ರದ ದಲಿತ ಮಹಿಳೆಯರಲ್ಲಿ ಎಂ.ಎ. ಪಾಸಾದ ಪ್ರಥಮಳು ನಾನಾಗಿದ್ದೇನೆಂದು ನನಗೆ ಗೊತ್ತಾದುದು ಡಾ॥ ಭಾಲಚಂದ್ರ ಮುಣಗೇಕರ್ ಅವರು ಈ ಕುರಿತು ತಿಳಿಸಿ, 'ಸನ್ಮಾನ ಕಾರ್ಯಕ್ರಮ'ವನ್ನು ಏರ್ಪಡಿಸುವ ವಿಷಯವನ್ನು ಪ್ರಸ್ತಾಪಿಸಿದಾಗ. ಒಂದು ಕಡೆ ನನಗೆ ಅಪಾರ ಸಂತೋಷವಾಗಿತ್ತು. ಡಾ॥ ಮುಣಗೇಕರ್ ಅಂಥವರು -ನನಗೆ ಹೆಚ್ಚೇನೂ ಪರಿಚಯವಿಲ್ಲದವರು -ನನ್ನ ಪ್ರತಿಭೆಯನ್ನು ಗುರುತಿಸಿ, ನೂರಾರು ಜನರನ್ನು ಸೇರಿಸಿ, ನನ್ನನ್ನು ಕೊಂಡಾಡಿ ಸಾರ್ವಜನಿಕವಾಗಿ ಸನ್ಮಾನಿಸಿದ್ದು ಮರೆಯಲಾಗದ ಸಂದರ್ಭವಾಗಿತ್ತು. ಆದರೆ ಅದರೊಂದಿಗೆ, ನನ್ನ ಆಫೀಸಿನವರು, ಮನೆಯಲ್ಲಿ ನನ್ನ ಗಂಡ, ನನ್ನನ್ನು ಭಾಷಣಕ್ಕೆ ಆಹ್ವಾನಿಸುವ ದಲಿತ ಸಂಘಟನೆಗಳು...... ಯಾರಿಗೂ ನಾನು ಎಂ. ಎ. ಮುಗಿಸಿದ್ದು ಮಹತ್ವದ ವಿಷಯವಾಗಲಿಲ್ಲವಲ್ಲ ಎಂಬ ವ್ಯಥೆಯೂ ಉಕ್ಕಿ ಬಂತು. ನನ್ನ ಬಂಧು-ಬಳಗದವರಿಗೆ, ಗಂಡನ ಮನೆ ಕಡೆಯವರಿಗೆ ಎಂ.ಎ. ಎಂದರೇನೆಂಬುದೇ ತಿಳಿದಿರಲಿಲ್ಲ!.

'ಮೈತ್ರಿಣ'ಗೆ ಬರುವ ಮೊದಲು 'ದೈಹಿಕವಾಗಿ ನಾನು ಮಹಿಳೆ' ಎಂಬುದಷ್ಟೇ ನನಗೆ ತಿಳಿದಿತ್ತು. ಮಹಿಳೆಯಾಗಿರುವುದರ ದೈಹಿಕ (ಲೈಂಗಿಕ), ಸಾಮಾಜಿಕ, ಮಾನಸಿಕ, ಆರ್ಥಿಕ, ಹಾಗೂ ರಾಜಕೀಯ ಅರ್ಥ ನನಗಾಗಿರಲಿಲ್ಲ. ಮಹಿಳೆಯರನ್ನು ಪುರುಷ ಸಮಾಜ ಸಾಮಾನ್ಯವಾಗಿ ಹೇಗೆ ಅರ್ಥ ಮಾಡಿಕೊಂಡಿದೆಯೋ ನನಗೂ ಆ ಅರ್ಥವೇ ಗೊತ್ತಿತ್ತು. 'ಮಹಿಳೆಗೆ ಸ್ವತಂತ್ರ ವ್ಯಕ್ತಿತ್ವ ಇರಬೇಕು; ಅದನ್ನು ರೂಪಿಸಿಕೊಳ್ಳಲು ಈ ಸಮಾಜ ಅವಕಾಶ ನೀಡಿಲ್ಲ; ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಮುಂದಾಗುವ ಮಹಿಳೆಯನ್ನು ಸಮಾಜ ತುಚ್ಛವಾಗಿ ನೋಡುತ್ತದೆ......' ಮುಂತಾದ ಯಾವ ತಿಳಿವಳಿಕೆಯೂ ನನಗಿರಲಿಲ್ಲ; ಇಂಥ ತಿಳಿವಳಿಕೆ ನೀಡುವ ವಾತಾವರಣ ನನಗೆ ದೊರಕಿರಲಿಲ್ಲ. ವಯಸ್ಕಳಾದ ಬಳಿಕ ತಂದೆ-ತಾಯಿಗಾಗಿ, ಗಂಡ-ಅತ್ತೆಗಾಗಿ, ಮಕ್ಕಳಿಗಾಗಿ ಜೀವ ತೇಯುವುದೇ ನನ್ನ ಧ್ಯೇಯವಾಗಿತ್ತು. ಅಡುಗೆ ಮನೆ, ಆಫೀಸ್, ಮಕ್ಕಳ ಸೇವೆ ಎಲ್ಲ ಮುಗಿಸಿ ರಾತ್ರಿ ದೇಹ ಬಳಲಿದ್ದರೂ, ಗಂಡನಿಗೆ ನಗುಮುಖದೊಂದಿಗೆ ಮೈ ಒಪ್ಪಿಸುವುದು ನನ್ನ ಕರ್ತವ್ಯವೆಂದುಕೊಂಡಿದ್ದೆ. ಇದರಲ್ಲೇ ಹೆಣ್ಣಿನ ಜೀವನದ ಧನ್ಯತೆ ಇದೆ ಎಂದು ತಿಳಿದಿದ್ದೆ. ಮಕ್ಕಳ ಮೆಚ್ಚುಗೆಗಾಗಿ, ಗಂಡನ ಒಂದು ಕಟಾಕ್ಷಕ್ಕಾಗಿ ಹಾತೊರೆಯುತ್ತಿದ್ದೆ. ಪತ್ನಿಯಾಗಿ, ಗೃಹಿಣಿಯಾಗಿ, ತಾಯಿಯಾಗಿ, ನಾನು ಮಾಡಬೇಕಾಗಿರುವ ಸಾಧನೆ ಇದೇ ಎಂದು ಭಾವಿಸಿದ್ದೆ.

* * *

'ಮೈತ್ರಿಣ' ಗುಂಪಿನಲ್ಲಿ ಪಡೆದ ತಿಳಿವಳಿಕೆಯಿಂದಾಗಿ, ನಾನು ತೀವ್ರವಾಗಿ ಬದಲಾಗುತ್ತಾ ನನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುತ್ತಾ ಬಂದೆ. ಹಾಗೆಂದು ಮನೆಯಲ್ಲಿ ಮಕ್ಕಳಿಗಾಗಲಿ, ಗಂಡನಿಗಾಗಲಿ, ಆಫೀಸಿನ ಕೆಲಸಕ್ಕಾಗಲಿ ಯಾವ ವ್ಯತ್ಯಯವೂ ಆಗದಂತೆ ಎಚ್ಚರ ವಹಿಸಿದೆ. ಆದರೂ, ನನ್ನ ಆಫೀಸು ನನ್ನನ್ನು ಅರ್ಥ ಮಾಡಿಕೊಳ್ಳಲಿಲ್ಲ. ನನ್ನ ಮನೆಯೂ ಅಷ್ಟೇ. ವಿಚಾರವಂತೆಯಾಗಿ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳ ಬಯಸುವ ಪತ್ನಿ ನನ್ನ ಗಂಡನಿಗೆ ಬೇಡವಾಗಿತ್ತು. ಆಫಿಸಿನಲ್ಲೂ ಕೆಲಸ ಮಾಡಿ ಸಂಬಳ ತಂದು ತನ್ನ ಕೈಗೆ ಕೊಡುತ್ತ, ತನ್ನ ಕೃಪಾಕಟಾಕ್ಷಕ್ಕಾಗಿ ಹಂಬಲಿಸುವ, ಅದಕ್ಕಾಗಿ ಆಗೀಗ ಆಡುವ ಅವಹೇಳನದ ಮಾತುಗಳನ್ನು ನುಂಗಿಕೊಳ್ಳುವ 'ವ್ಯಕ್ತಿತ್ವಹೀನ ಪತ್ನಿ' ನನ್ನ ಗಂಡನಿಗೆ ಬೇಕಾಗಿತ್ತು.

ಹಾಗೆಂದು ಮಿಸ್ಟರ್ ಪವಾರ್ (ಅಂದರೆ ನನ್ನ ಗಂಡ ಹರಿಶ್ಚಂದ್ರ) ಹೃದಯಶೂನ್ಯರೇನೂ ಆಗಿರಲಿಲ್ಲ. ಆತನಿಗೆ ಪತ್ನಿಯ ಬಗ್ಗೆ ಅಭಿಮಾನವಿರಲಿಲ್ಲವೆಂದೂ ಅಲ್ಲ. ಪಾಪ! ಆತ ದಿಕ್ಕು ತೋಚದ ಸ್ಥಿತಿ ತಲುಪಿದ್ದರು. ನನ್ನ ಜೊತೆಗಿನ ಆತನ ಇಬ್ಬಂದಿ ವರ್ತನೆಯಲ್ಲೇ ಈ ಸ್ಥಿತಿಯ ದರ್ಶನವಾಗುತ್ತದೆ. ಏಕಾಂತದಲ್ಲಿ, ಮನೆಯ ಒಳಗೆ ಆತ ನನ್ನ ಬಗ್ಗೆ ತುಂಬಾ ಅಭಿಮಾನಪಡುತ್ತಿದ್ದ; ನನ್ನ ಕರ್ತೃತ್ವ ಶಕ್ತಿಯನ್ನು ಮೆಚ್ಚಿ ಮಾತಾಡುತ್ತಿದ್ದ. 'ಹಳ್ಳಿಯ ಹುಡುಗಿ, ಕೇವಲ ಮೆಟ್ರಿಕ್ ಓದಿದವಳು, ಮುಂಬಯಿಗೆ ಬಂದು ಸಂಸಾರ ತೂಗಿಸಿಕೊಂಡು, ಆಫೀಸ್ ಕೆಲಸ ಮಾಡಿಕೊಂಡು, ಅಲ್ಲೂ ಸೈ ಎನಿಸಿಕೊಂಡು ಪ್ರಮೋಷನ್ ಪಡೆದು, ಬಿ.ಎ. ಮತ್ತು ಎಂ.ಎ. ಓದುವುದು ಸಾಮಾನ್ಯ ವಿಷಯವೇ? ಇದೊಂದು ಮೆಡಲ್ ನೀಡಿ ಗೌರವಿಸಬೇಕಾದ ಸಾಧನೆ......' ಎಂದೆಲ್ಲಾ ಹೇಳಿ ಪ್ರೀತಿ ತೋರುತ್ತಿದ್ದ. ಇದನ್ನು ನಾಟಕ ಎನ್ನಲು ನಾನು ಸುತರಾಂ ತಯಾರಿರಲಿಲ್ಲ. ಏಕೆಂದರೆ ಆತ ಅತ್ಯಂತ ಭಾವುಕನಾಗಿ, ಹೃದಯಾಂತರಾಳದಿಂದ ಇಂಥ ಎಷ್ಟೋ ಮಾತುಗಳನ್ನು ಅನೇಕ ಬಾರಿ ಆಡುತ್ತಿದ್ದ.

ಆದರೆ, ಈ ಅಭಿಪ್ರಾಯವನ್ನು ಸಾರ್ವಜನಿಕವಾಗಿ ವ್ಯಕ್ತಪಡಿಸಲು, ಸಮಾಜದಲ್ಲಿ ಪತ್ನಿಯ ಪ್ರಾಮುಖ್ಯವನ್ನು ಒಪ್ಪಿಕೊಳ್ಳಲು ಆತ ತಯಾರಿರಲಿಲ್ಲ. 'ನಾಲ್ಕು ಜನರ ಮುಂದೆ ಪತ್ನಿ ಪತಿಗೆ ವಿಧೇಯ ಳಾಗಿರಬೇಕು' ಎಂದು ಬಯಸುತ್ತಿದ್ದ. ಇಲ್ಲದಿದ್ದರೆ ಆತನ ಪುರುಷತ್ವದ ಅಹಂಗೆ ಧಕ್ಕೆಯಾಗುತ್ತಿದ್ದಂತಿತ್ತು. 'ನಮ್ಮ ಜಾತಿಯ ಲಕ್ಷಾಂತರ ಹೆಂಗಸರು ಗಂಡನ ಆಣತಿ ಅನುಸರಿಸಿ ಜೀವನ ಮಾಡ್ತಾರೆ. ಗಂಡನ ಸುಖದಲ್ಲಿ ತಮ್ಮ ಸುಖವನ್ನು, ಮಕ್ಕಳನ್ನು ದೊಡ್ಡವರನ್ನಾಗಿ ಮಾಡುವುದರಲ್ಲಿ ತಮ್ಮ ಬದುಕಿನ ಸಾರ್ಥಕತೆಯನ್ನು ಕಾಣುತ್ತಾರೆ. ಅವರೆಲ್ಲ ಸಂತೋಷದಿಂದ ಇದ್ದಾರೆ. ನೀನು ನಾಲ್ಕು ಅಕ್ಷರ ಕಲಿತು ಬಿಟ್ಟರೆ ಗಂಡನ ಮೇಲೆ ಸವಾರಿ ಮಾಡ್ತೀಯಾ?......' ಎಂದು ಚುಚ್ಚುತ್ತಿದ್ದ. ನಾನು ನಿಖರವಾಗಿ ಸ್ಪಷ್ಟ ಮಾಡಿಕೊಂಡಂತೆ, ಆತ ನನ್ನನ್ನು ಪ್ರೀತಿಸುತ್ತಿದ್ದ, ಪಂಜರದೊಳಗಿನ ಗಿಣಿಯನ್ನು ಪ್ರೀತಿಸುವ ಹಾಗೆ. ಕನಿಷ್ಠ ಪಕ್ಷ ಸಾರ್ವಜನಿಕವಾಗಿಯಂತೂ ಪತಿಯ ಆಜ್ಞಾಧಾರಕಳಾಗಿ ಪತ್ನಿಯು ಇರಬೇಕು ಎಂಬುದು ಆತನ ಬಲವಾದ ನಂಬಿಕೆಯಾಗಿತ್ತು.

ಗಂಡನ ಈ ಮಾತನ್ನು ಕೇಳಿಸಿಕೊಂಡು ಕೆಲವೊಮ್ಮೆ ಮಾರುತ್ತರ ನೀಡುತ್ತಿದ್ದೆ; ಆಗ ಆತನ ದನಿ ಗಟ್ಟಿಯಾಗುತ್ತಿತ್ತು; ಮೈಯಲ್ಲಿ ಆವೇಶ ಕಾಣುತ್ತಿತ್ತು. ಕೈಯಲ್ಲಿನ ಅಥವಾ ಹತ್ತಿರದ ವಸ್ತುಗಳನ್ನು ಎತ್ತಿ ಬಿಸಾಡುತ್ತಿದ್ದ. ತನ್ನನ್ನು ಉಲ್ಲಂಘಿಸುವುದನ್ನು ಆತ ಸಹಿಸುತ್ತಿರಲಿಲ್ಲ. ಇನ್ನೂ ಕೆಲವೊಮ್ಮೆ ನಾನು ಆತನ ಇಂಥ ಹೇಳಿಕೆಗೆ ಉತ್ತರಿಸುವ ಗೋಜಿಗೇ ಹೋಗುತ್ತಿರಲಿಲ್ಲ. ಆಗ ಆತನ ಆಕ್ರೋಶ ಕೆಲ ಕಾಲಾನಂತರ ಕಡಿಮೆಯಾಗುತ್ತಿತ್ತು.

'ನಮ್ಮ ಹೆಂಗಸರು ಸಂತೋಷದಿಂದ ಇದ್ದಾರೆ' ಎಂಬ ಆತನ ಮಾತಿನ ಹಿನ್ನೆಲೆಯಲ್ಲಿ, ನಾನು ಗಂಡನ ಊರಿನಲ್ಲಿ ಹೆಂಗಸರ ದೈನಂದಿನ ಜೀವನವನ್ನು ನೆನಪಿಸಿಕೊಂಡೆ; ಅದನ್ನು ನನ್ನ ಮನೋಭಿತ್ತಿಯಲ್ಲಿ ಪುನಃ ತಂದುಕೊಂಡೆ. ನಾನೂ ಅಲ್ಲಿ ಹಲವಾರು ತಿಂಗಳು ಇದ್ದೆ. ನಾನೂ ಸಹ ಆ ಹೆಂಗಸರ ಹಾಗೆಯೇ ದಿನಗಳನ್ನು ಕಳೆದಿದ್ದೆ.

ಚುಮು ಚುಮು ಮುಂಜಾನೆ ಏಳುವುದು; ಶೌಚಾದಿ ಮುಗಿಸುವುದು; ಮಳೆ, ಚಳಿ, ಬಿಸಿಲು ಏನೇ ಇರಲಿ ಬಾವಿಯಿಂದ ಸ್ನಾನಕ್ಕೆ, ಬಟ್ಟೆ ಒಗೆಯುವುದಕ್ಕೆ, ಅಡುಗೆಗೆ, ಕುಡಿಯುವುದಕ್ಕೆ ನೀರು ತರುವುದು; ರಾತ್ರಿ ಅಡುಗೆ ಮಾಡಿದ್ದ ಪಾತ್ರೆ, ತಟ್ಟೆಗಳನ್ನು ತೊಳೆಯುವುದು; ಗಂಡಸರಿಗೆ, ಮಕ್ಕಳಿಗೆ ಉಪಾಹಾರ ಸಿದ್ಧಪಡಿಸಿ ಬಡಿಸುವುದು; ಗಂಡಸರು ಹೊಲಕ್ಕೆ ಅಥವಾ ಕೆಲಸಕ್ಕೆ, ಮಕ್ಕಳು ಶಾಲೆಗೆ ಹೋದ ಮೇಲೆ ಮತ್ತೆ ಪಾತ್ರೆ/ತಟ್ಟೆ ತೊಳೆದುಕೊಳ್ಳುವುದು. ಇಷ್ಟಾದ ಮೇಲೆ ತನ್ನ ಉಪಾಹಾರ. ಇದಾಗುತ್ತಿದ್ದಂತೆ ಮಧ್ಯಾಹ್ನದ ಅಡುಗೆಯ ಸಿದ್ಧತೆ. ಗಂಡಸರು ದೂರದ ಹೊಲಕ್ಕೆ ಹೋಗಿದ್ದರೆ, ಅವರಿಗೆ ಊಟದ ಸಮಯದೊಳಗೆ ಊಟ ಒಯ್ಯುವುದು, ನಂತರ ಅಲ್ಲೇ ಹೊಲದ ಕೆಲಸ ಮಾಡುವುದು; ಸಂಜೆ ತುಸು ಮುಂಚಿತವಾಗಿ ಮನೆಗೆ ಮರಳಿ ಗಂಡಸರ ಸ್ನಾನಕ್ಕೆ ನೀರು ಕಾಯಿಸುವುದು, ಬೆಳಿಗ್ಗೆ ತಂದ ನೀರು ಖಾಲಿಯಾಗಿದ್ದರೆ, ಮತ್ತೆ ಬಾವಿಯಿಂದ ನೀರು ತರುವುದು, ರಾತ್ರಿ ಅಡುಗೆ ಸಿದ್ಧ ಪಡಿಸುವುದು, ಗಂಡಸರು ಬರುತ್ತಲೇ ಅವರಿಗೆ ಸ್ನಾನಕ್ಕೆ ನೀರು ಕೊಡುವುದು, ಅವರು ಹೆಚ್ಚು ಶ್ರಮದ ಕೆಲಸ ಮಾಡಿದ್ದರೆ ಅವರ ಬೆನ್ನು, ಕೈ-ಕಾಲುಗಳನ್ನು ಉಜ್ಜಿ ಬಿಸಿ ನೀರು ಹನಿಸುವುದು, ಎಲ್ಲರಿಗೂ ಊಟ ಬಡಿಸುವುದು, ಕೊನೆಗೆ ಒಬ್ಬಳೇ ಅಥವಾ ಮನೆಯ ಇತರ ಹೆಂಗಸರ ಜೊತೆಗೆ ಊಟ ಮಾಡುವುದು; ಬೇಗ ಬೇಗ ಪಾತ್ರೆ ಎತ್ತಿಟ್ಟು, ಬೆಳಗಿನ ಉಪಾಹಾರದ ಚಿಂತೆ ಮಾಡಿ, ಅದಕ್ಕೆ ತಯಾರಿ ಮಾಡಿಕೊಂಡು, ತಾನು ಸ್ನಾನ ಮಾಡಿ ಕಾಯುತ್ತಿರುವ ಅಥವಾ ಗೊರಕೆ ಹೊಡೆಯುತ್ತಿರುವ ಗಂಡನ ಬಳಿ ಹೋಗುವುದು...... ಇದು ಹಳ್ಳಿ ಹೆಂಗಸರ ದಿನಚರಿ. ಹೆಂಗಸರು ಈ ಎಲ್ಲಾ ಕೆಲಸಗಳಲ್ಲಿ ತೊಡಗಿರುವಾಗ, ಗಂಡಸರು ಬೀಡಿ ಸೇದುತ್ತಾ ಅಂಗಳದಲ್ಲಿ ಕುಳಿತುಕೊಳ್ಳುವರು, ಕೆಲವರು ಸಾರಾಯಿ ಅಂಗಡಿಗೆ ಹೋಗಿ ಬರುವರು.

ಮಿಸ್ಟರ್ ಪವಾರ್ 15-20 ವರ್ಷ ಹೆಂಗಸರ ಈ ಚಿತ್ರಣವನ್ನು ನೋಡಿದ್ದ. ತನ್ನ ಪತ್ನಿ ಕೂಡ ತವರುಮನೆಯಲ್ಲಿ ಹಾಗೂ ತನ್ನ ಮನೆಯಲ್ಲಿ 15-16 ವರ್ಷ ಇದೇ ರೀತಿ ಕೆಲಸ ಮಾಡಿದ್ದನ್ನು, ಗಂಡನ ಮತ್ತು ಸಂಸಾರದ ಸೇವೆಯಲ್ಲಿ ತೇಯ್ದುಕೊಂಡು ಧನ್ಯತೆ ಕಾಣಲು ಹವಣಿಸಿದ್ದನ್ನು ಕಂಡಿದ್ದ. ಹಾಗಾಗಿ ಇದು ಆತನ ಮನಸ್ಸಿನಲ್ಲಿ ಅಚ್ಚೊತ್ತಿತ್ತು. ಈಗ ಬಿ.ಎ, ಎಂ.ಎ ಓದಿ ಮತ್ತು ಮಹಿಳಾ ವಿಮೋಚನಾ ಸಂಘಟನೆ ಸೇರಿಕೊಂಡ ಬಳಿಕ ಕಂಡು ಬಂದ ತನ್ನ ಪತ್ನಿಯ ಬಂಡಾಯದ ಭಾಷೆ-ನಡವಳಿಕೆ ಆತನನ್ನು ಕೆರಳಿಸಿರುವಂತಿತ್ತು; ಪುರುಷಾಧಿಪತ್ಯವನ್ನು ಚಲಾಯಿಸಲು ಪ್ರೇರೇಪಿಸುವಂತಿತ್ತು. ಪತ್ನಿಯ ಬಂಡಾಯ ಈಗಷ್ಟೇ ಕಾಣಿಸಿಕೊಂಡಿರುವ ಹಿನ್ನೆಲೆಯಲ್ಲಿ ಈಗಲೇ ಅದನ್ನು ಹತ್ತಿಕ್ಕುವ ವಿಚಾರ ಮಿಸ್ಟರ್ ಪವಾರ್ ತಲೆ ಹೊಕ್ಕಿರುವಂತಿತ್ತು.

ಪುರುಷನಂತೆ ಮಹಿಳೆಗೂ ತನ್ನದೇ ಆದ ವ್ಯಕ್ತಿತ್ವ ಇದೆ; ಪುರುಷನಿಗೆ ಸಿಗುವ ಎಲ್ಲಾ ಹಕ್ಕು, ಅಧಿಕಾರ, ಅನುಕೂಲತೆಗಳು ಮಹಿಳೆಗೂ ಸಿಗಬೇಕು; ಪುರುಷನ ತೋಳ್ಬಲ, ಮಹಿಳೆಯ ಜನನಶಕ್ತಿ ಎರಡೂ ಅನನ್ಯವಾದವು. ಆದ್ದರಿಂದ ಯಾರೂ ಮೇಲಲ್ಲ, ಯಾರೂ ಕೀಳಲ್ಲ; ಯಾರೂ ನೇತಾರರಾಗಬೇಕಿಲ್ಲ, ಯಾರೂ ಹಿಂಬಾಲಕರಾಗಬೇಕಿಲ್ಲ ......ಮುಂತಾಗಿ ಒಂದು ಕಡೆ ವಿಚಾರ ಆಳವಾಗುತ್ತಿತ್ತು; ಗಾಢವಾಗುತ್ತಿತ್ತು. ಇನ್ನೊಂದು ಕಡೆ 'ಸಂಸಾರವನ್ನು ಹಾಳು ಮಾಡುವ ವಿಚಾರ ಏಕೆ ಬೇಕು? ಈ ವಿಚಾರದವರು ಸಂಸಾರಕ್ಕೇ ಬರಬಾರದು......' ಎಂಬಂಥ ವಿಚಾರವೂ ಮುತ್ತುತ್ತಿತ್ತು. ಈ ಎರಡೂ ವಿಚಾರಗಳ ಸಂಘರ್ಷದಲ್ಲಿ ಮೊದಲಿನದೇ ಜಯಭೇರಿ ಹೊಡೆಯುತ್ತಿತ್ತು.

* * *

'ಮೈತ್ರಿಣ' ಗುಂಪಿನ ಇನ್ನೊಂದು ವಿಶೇಷತೆ ನನ್ನನ್ನು ಸೆಳೆದಿತ್ತು. ಅದು ಬರೀ ಚರ್ಚೆ, ವಿಚಾರ ಸಂಕಿರಣ, ಕಾರ್ಯಾಗಾರ ಮುಂತಾದವುಗಳನ್ನು ಏರ್ಪಡಿಸುವ ಗುಂಪಾಗಿರಲಿಲ್ಲ. ಅಲ್ಲಿಗೆ ಬರುತ್ತಿದ್ದ ಪ್ರತಿಯೊಬ್ಬರೂ ತಮ್ಮದೇ ಆದ ರೀತಿಯಲ್ಲಿ ಕ್ರಿಯಾಶೀಲರಾಗಿದ್ದರು. ಒಬ್ಬರು ಅನಾಥ ಮಹಿಳೆಯರಿಗೆ, tay home ಮತ್ತು ತರಬೇತಿ ಒದಗಿಸುತ್ತಿದ್ದರೆ, ಇನ್ನೊಬ್ಬರು ಬಾಲಕಿಯರಿಗಾಗಿ hostel ನಡೆಸುತ್ತಿದ್ದರು. ಇನ್ನೊಬ್ಬರು ಕೆಲಸದ ಸ್ಥಳದಲ್ಲಿ ಅಥವಾ ಕುಟುಂಬದಲ್ಲಿ ಸಂಕಷ್ಟಕ್ಕೀಡಾದ ಮಹಿಳೆಯರಿಗೆ ಸಾಂತ್ವನ, ಸಲಹೆ, ಕಾನೂನು ನೆರವು ನೀಡುವ ಕೇಂದ್ರವನ್ನು ನಡೆಸುತ್ತಿದ್ದರು. ವರದಕ್ಷಿಣೆ, ಅನ್ಯಾಯ, ದೌರ್ಜನ್ಯಗಳಿಗೆ ತುತ್ತಾದ ಮಹಿಳೆಯರಿಗೆ 'ಮೈತ್ರಿಣ' ಗುಂಪಿನ ಬಾಗಿಲು ಸದಾ ತೆರೆದಿತ್ತು. ಇಲ್ಲಿಗೆ ಬರುವವರು ಆಶ್ರಯ ಪಡೆಯಲು ದೀನ ಭಾವ ತೋರಬೇಕಿರಲಿಲ್ಲ. ವಯಸ್ಸು, ವಿದ್ಯಾರ್ಹತೆ, ಉದ್ಯೋಗ ಏನೇ ಇರಲಿ, ಇಲ್ಲಿ ಎಲ್ಲರೂ ಸ್ನೇಹಿತರೇ. ನನಗಿಂತ ಚಿಕ್ಕವರೂ ನನಗೆ 'ನೀನು' ಎಂದು ಮಾತಾಡಿಸಿದಾಗ ಮೊದಲು ಕಿರಿಕಿರಿಯಾಗುತ್ತಿತ್ತು; ನಂತರ ಸರಿ ಹೋಯಿತು. ಚರ್ಚೆ ಮಾಡುವಾಗ ತೃತೀಯ ಪುರುಷದ ಬಳಕೆ ತೀರಾ ಕಡಿಮೆ ಇರುತ್ತಿತ್ತು; ಇದರ ಜಾಗದಲ್ಲಿ ದ್ವಿತೀಯ ಪುರುಷ ಪ್ರಯೋಗವಾಗುತ್ತಿತ್ತು. 'ಯಾರೋ ಒಬ್ಬರು ನೋವಾಗಿರುವ ಹಾಗೆ ಮಾತಾಡ್ತಾರೆ; ಎಂದಿಟ್ಟುಕೊಳ್ಳಿ; ಆಗ ಹೇಗೆ ಹ್ಯಾಂಡಲ್ ಮಾಡುವುದು?' ಎಂಬ ಪ್ರಶ್ನೆಯನ್ನು 'ನೀನು ನನಗೆ ನೋವಾಗುವ ಹಾಗೆ ಮಾತಾಡ್ತೀಯಾ. ಆಗ ಹೇಗೆ ಹ್ಯಾಂಡಲ್ ಮಾಡಬೇಕು?' ಎಂದು ನೇರವಾಗಿ ದ್ವಿತೀಯ ಪುರುಷದಲ್ಲಿ ಕೇಳುತ್ತಿದ್ದರು. ಪ್ರಾರಂಭದಲ್ಲಿ ನಾನು 'ನಾನು ಏಕೆ ನೋವಾಗುವ ಹಾಗೆ ಮಾತಾಡ್ತೇನೆ?' ಎಂದು ಕೇಳುತ್ತಿದ್ದೆ. ವಾಸ್ತವವಾಗಿ ಅವರು ನನಗೆ ಹೇಳುವ ಉದ್ದೇಶ ಹೊಂದಿರುತ್ತಿರಲಿಲ್ಲ ಎಂಬುದು ಕೆಲವಾರು ಸಂದರ್ಭಗಳ ಬಳಿಕ ತಿಳಿಯಿತು.

ಮದುವೆಯಾದ ಹಲವರು ತಾಳಿ ಧರಿಸುತ್ತಿರಲಿಲ್ಲ; ಕಾಲುಂಗುರ ಹಾಕಿಕೊಳ್ಳುತ್ತಿರಲಿಲ್ಲ. ಎಷ್ಟೋ ಜನರು ಕುಂಕುಮವನ್ನು ಅಲಂಕಾರದ ವಸ್ತುವಾಗಿ ಬಳಸುತ್ತಿದ್ದರು. ನಾನು ಈ ಬಗ್ಗೆಯೂ ಹತ್ತಾರು ಬಾರಿ ಮಾತಾಡಿದೆ. ಇವೆಲ್ಲವೂ ಪುರುಷಾಧಿಪತ್ಯ ಸಮಾಜ ಹೇರಬಯಸುವ ಯಜಮಾನಿಕೆಯ ಸಂಕೇತಗಳೆಂದು ವಾದಿಸುತ್ತಿದ್ದುದರಲ್ಲಿ ಅರ್ಥವಿದೆ ಎನಿಸಿತು.

ಇದನ್ನು ನನಗೇ ಅನ್ವಯಿಸಿಕೊಂಡೆ. ನಾನಂತೂ ಬೌದ್ಧ ಧರ್ಮೀಯಳು. ಇಲ್ಲಿ ಇವುಗಳಿಗೆಲ್ಲ ಜಾಗವಿಲ್ಲ. ಆದರೂ ನಾನು ಏಕೆ ಧರಿಸುತ್ತಾ ಬಂದೆ? ಪುರುಷಪ್ರಧಾನ ಸಮಾಜದ ಯಜಮಾನಿಕೆಯ ಈ ಸಂಕೇತಗಳ ಬಗ್ಗೆ ನನಗೆಂದೂ ಜಿಜ್ಞಾಸೆಯೇ ಏರ್ಪಟ್ಟಿರಲಿಲ್ಲ. ಮಿಸ್ಟರ್ ಪವಾರ್ ಒಳ್ಳೇ ಮೂಡ್‌ನಲ್ಲಿರುವಾಗ ಒಂದು ಬಾರಿ ಈ ಬಗ್ಗೆ ಕೇಳೇ ಬಿಟ್ಟೆ. ಆತನೂ ಈ ಬಗ್ಗೆ ಎಂದೂ ವಿಚಾರ ಮಾಡಿದಂತಿರಲಿಲ್ಲ. ಕಡೆಗೆ 'ನೀನು ಪಂಡಿತಳಲ್ವಾ? ಹೇಳು ನೋಡೋಣ?'

ಎಂಬ ದನಿಯಲ್ಲಿ ನನ್ನನ್ನೇ 'ತಾಳಿ ಬಗ್ಗೆ ಬೌದ್ಧ ಧರ್ಮ ಏನು ಹೇಳುತ್ತೆ?' ಎಂದು ಕೇಳಿದ. ನಾನು 'ನನಗೆ ತಿಳಿದಿರುವಂತೆ ಅದಕ್ಕೆ ಜಾಗವಿಲ್ಲ; ಗಂಡನದೂ ಬರಿ ಕೊರಳು; ಹೆಂಡತಿಯದೂ ಬರಿ ಕೊರಳು. ಇಷ್ಟ ಬಂದರೆ ಯಾರಾದರೂ ಸರ ಹಾಕಿಕೊಳ್ಳಬಹುದು, ಕಡ್ಡಾಯವಿಲ್ಲ' ಎಂದು ವಿವರಿಸಿದೆ. ಆತನಿಗೆ ನಿಜಕ್ಕೂ ಗೊಂದಲವಾಯಿತೆಂದು ಕಾಣುತ್ತದೆ. 'ಏನಾದ್ರೂ ಮಾಡಿಕೊ' ಎಂದು ಹೇಳಿ, ಪೇಪರ್‌ನಲ್ಲಿ ಮುಖ ಹುದುಗಿಸಿ ಬಿಟ್ಟ. 'ತಾಳಿ ಇಲ್ಲದಿದ್ರೆ ಜನ ಏನಂದಾರು?' ಎಂದೂ ಆತ ಹೇಳಲಿಲ್ಲ. 'ಹಾಗಾದರೆ ತಾಳಿ ಬೇಡ ಬಿಡು' ಎಂದೂ ಆತ ಹೇಳಲಿಲ್ಲ. ಮೊದಲನೇ ಮಾತು ಹೇಳುವಷ್ಟು ಆತ ಹಿಂದೂ ಸಂಪ್ರದಾಯದ ಪರ ಇರಲಿಲ್ಲ! ಎರಡನೇ ಮಾತು ಹೇಳುವಷ್ಟು ಆತ ಬೌದ್ಧ ಸಂಪ್ರದಾಯದ ಪರ ಇರಲಿಲ್ಲ!!

ಆ ನಂತರ ನನಗೆ ತಾಳಿ ಅಲಂಕಾರದ ವಸ್ತುವಾಯಿತು. ಇಷ್ಟ ಬಂದಾಗ ಹಾಕಿಕೊಳ್ಳುತ್ತಿದ್ದೆ. ಮೊದಲು ನನ್ನ ಬರಿ ಕೊರಳು ನೋಡಿದಾಗ, ಮಿಸ್ಟರ್ ಪವಾರ್ ಕಸಿವಿಸಿಗೊಳ್ಳುತ್ತಿದ್ದಂತಿತ್ತು; ಮುಖ ತಿರುಗಿಸಿ ಬಿಡುತ್ತಿದ್ದ. ಆದರೆ ಕೆಲ ಕಾಲಾನಂತರ ಆತ ಈ ಬಗ್ಗೆ ನಿರ್ಲಿಪ್ತತೆಯನ್ನು ತೋರತೊಡಗಿದ.

ಈ ಕಾಲದಲ್ಲಿ ನನ್ನ ಕುಟುಂಬದಲ್ಲಿ ಭಾರಿ ಬದಲಾವಣೆಗಳು ಜರುಗಿದವು. ಮಿಸ್ಟರ್ ಪವಾರ್ ಮತ್ತು ನನ್ನ ಮಧ್ಯೆ ಮಾತು ಕಡಿಮೆಯಾದವು; ಮಕ್ಕಳು ಒಮ್ಮೊಮ್ಮೆ ಬೆಚ್ಚಿ ನಿಲ್ಲುತ್ತಿದ್ದರು, ಮತ್ತೊಮ್ಮೆ ನಮಗೇ ಸಮಾಧಾನ ಹೇಳುತ್ತಿದ್ದರು. 'ನೀನು ಸ್ತ್ರೀ ವಿಮೋಚನಾವಾದಿ' ಎಂಬುದು ಮಿಸ್ಟರ್ ಪವಾರ್ ಬಳಸುವ ಬೈಗುಳವಾಯಿತು. ಗೆಳೆಯರು ಮತ್ತು ಸಂಬಂಧಿಕರ ಮುಂದೆ ಮಾತ್ರ ನಾವು ಗಂಡ-ಹೆಂಡತಿಯರ ಪಾತ್ರದಲ್ಲಿ ಕಾಣತೊಡಗಿದೆವು.

* * *

ದಲಿತ ಚಳವಳಿ, ದಲಿತ ಮಹಿಳಾ ಸಾಹಿತ್ಯ, ಗ್ರಾಮೀಣ ಸಾಹಿತ್ಯ ಇತ್ಯಾದಿಗಳಿಗೆ ನಾನು ನನ್ನನ್ನು ತೆರೆದುಕೊಳ್ಳಲಾರಂಭಿಸಿದೆ. ಈ ಎಲ್ಲವುಗಳ ಬಗ್ಗೆ ನನಗೆ ಹೆಚ್ಚಿನ, ನಿರ್ದಿಷ್ಟ ಜ್ಞಾನ ಇರಲಿಲ್ಲ. ನೌಕರಿ, ಮನೆಗೆಲಸ, ಮಕ್ಕಳ ಜವಾಬ್ದಾರಿ ನನ್ನ ಉನ್ನತ ಶಿಕ್ಷಣ...... ಇವುಗಳಿಂದಾಗಿ ನನಗೆ ಯಾವುದೇ ವಿಶೇಷ ಅವಕಾಶಗಳು ದೊರಕಿರಲಿಲ್ಲ. ಈ ಚಳವಳಿಗಳಲ್ಲಿ ಯಾವುದರ ಜೊತೆಗೆ ನನ್ನನ್ನು ವಿಶೇಷವಾಗಿ ಗುರುತಿಸಿಕೊಳ್ಳುವುದು ಎಂಬ ತುಯ್ದಾಟವೂ ಇತ್ತು. ನನ್ನ ತಿಳಿವಳಿಕೆ ಆಳ, ನಿಖರತೆಯನ್ನು ಹೊಂದಿಲ್ಲ ಎಂಬ ಅರಿವು ನನಗಿತ್ತು.

ಮಹಿಳಾ ಚಳವಳಿ/ಚಿಂತನೆಯಲ್ಲಿ ಭಾಗಿಯಾಗುವುದರ ಜೊತೆಗೆ ನಾನು ದಲಿತ ಚಳವಳಿ/ಚಿಂತನೆಯಲ್ಲೂ ಭಾಗಿಯಾದೆ. ದಲಿತ ವಿದ್ಯಾರ್ಥಿ, ಯುವಜನ, ಮಹಿಳಾ, ಕೊಳೆಗೇರಿ ನಿವಾಸಿ, ನೌಕರ-ಅಧಿಕಾರಿಗಳ ಸಂಘಗಳ ಕಾರ್ಯಕ್ರಮಗಳಿಗೆ ಆಹ್ವಾನಿತಳಾಗತೊಡಗಿದೆ. ದಲಿತ ಸಮುದಾಯದಲ್ಲಿ ಮಹಿಳಾ ಭಾಷಣಕಾರರು ಆಗ (1975ರ ಕಾಲದಲ್ಲಿ) ದೊರಕುವುದು ದುಸ್ತರವಾಗಿತ್ತು. ಹಾಗಾಗಿ ನನಗೆ ಹಲವಾರು ಆಹ್ವಾನಗಳು ಬರತೊಡಗಿದವು. ಅನೇಕ ಆಹ್ವಾನಗಳನ್ನು ಸ್ವೀಕರಿಸಿದೆ; ಈ ಮೂಲಕ ನನ್ನ ಅನುಭವ ವಿಸ್ತಾರಗೊಳ್ಳತೊಡಗಿತು. ವಿವಿಧ ಸ್ತರಗಳ ಜನರ ಮಧ್ಯೆ ಬೆರೆತು, ನನ್ನದೇ ಆದ ವಿಶಿಷ್ಟ ಚಿಂತನೆಯನ್ನು ಬೆಳೆಸಿಕೊಳ್ಳುವ ಪ್ರಕ್ರಿಯೆಯಲ್ಲಿ ಲೀನಳಾದೆ.

ದಲಿತ ಚಳವಳಿಯ ವಿಸ್ತಾರ-ಆಳಗಳು ನನಗೆ ತಿಳಿಯತೊಡಗಿದವು. ಮುಂಬೈಯಂಥ ಭಾರತದ ಅತಿ ದೊಡ್ಡ ಕೈಗಾರಿಕಾ ನಗರದಲ್ಲಿ ಸಂಪತ್ತು ನಿರ್ಮಾಣ ಮಾಡುವ ದಲಿತರ ಸ್ಥಿತಿಗತಿಗಳ ದಾರುಣತೆ ಕಣ್ಣಿಗೆ ರಾಚಿತು. ಕೊಳೆಗೇರಿ ನಿವಾಸಿಗಳೊಂದಿಗಿನ ಒಡನಾಟ ನನಗೆ ಹೊಸ ಪ್ರಪಂಚವನ್ನೇ ತೋರಿಸಿತು. 8 x 10 ಅಡಿಯ ಗುಡಿಸಲಲ್ಲಿ ನಾಲ್ಕರಿಂದ ಆರು ಜನ ವಾಸವಾಗಿದ್ದನ್ನು ಕಂಡೆ, ಅವರ ಬದುಕನ್ನು ಅರಿತು ಹೃದಯ ಕಿತ್ತು ಬರುತ್ತಿತ್ತು. ಬಾಬಾಸಾಹೇಬ್ ಅಂಬೇಡ್ಕರ್ ಜನ್ಮದಿನದ ಕಾರ್ಯಕ್ರಮಗಳನ್ನು ಕೊಳೆಗೇರಿಗಳಲ್ಲಿ ಏಪ್ರಿಲ್ 14 ರಿಂದ ಜೂನ್ ಮಧ್ಯಭಾಗದವರೆಗೆ 'ಬಾಬಾಸಾಹೇಬ್ ಜಯಂತಿ' ಎಂದು, ಬುದ್ಧ ಜಯಂತಿ ನಂತರ ಏರ್ಪಾಟಾಗುವ ಕಾರ್ಯಕ್ರಮಗಳಿಗೆ 'ಅಂಬೇಡ್ಕರ್-ಬುದ್ಧ ಜಯಂತಿ' ಎಂದೂ ಸಂಘಟಿಸುವುದು ರೂಢಿ. ಅಕ್ಟೋಬರ್-ನವೆಂಬರ್‌ನಲ್ಲಿ 'ಧಮ್ಮ ಚಕ್ರ ಪರಿವರ್ತನ ದಿನ' ಕಾರ್ಯಕ್ರಮಗಳು; ಡಿಸೆಂಬರ್-ಜನವರಿಯಲ್ಲಿ 'ಅಂಬೇಡ್ಕರ್ ಪರಿನಿರ್ವಾಣ -ಸಂವಿಧಾನ ಜಾರಿ ದಿನ' ಕಾರ್ಯಕ್ರಮಗಳು.

ಈ ಕಾಲದಲ್ಲಿ ಅನೇಕ ಕಾರ್ಯಕ್ರಮಗಳಿಗೆ ಭಾಷಣಕಾರಳಾಗಿ ಹೋದೆ. ಮಹಾರಾಷ್ಟ್ರದ ಮೂಲೆ ಮೂಲೆಗಳಿಂದ ಹೊಟ್ಟೆಪಾಡಿಗಾಗಿ ಮುಂಬೈಗೆ ಬಂದಿದ್ದವರ ಬದುಕನ್ನು ಕಂಡೆ; ಎಲ್ಲಾ ಕೊಳೆಗೇರಿಗಳ ಪರಿಸರ ಹೃದಯ ಇರಿಯುವಂಥದ್ದು. ಅಲ್ಲೂ ಗರಿಷ್ಠ ಅನಾನುಕೂಲವಾಗುತ್ತಿದ್ದುದು ಮಹಿಳೆಯರಿಗೆ ಮತ್ತು ಮಕ್ಕಳಿಗೆ. ಸಂಸಾರದ ಪೂರ್ಣ ಜವಾಬ್ದಾರಿ ಮಹಿಳೆಯರದು. ಗಂಡಸು ತಾನು ಸಂಪಾದಿಸಿದ ಕೂಲಿಯನ್ನು ಮನೆಗೆ ಕೊಟ್ಟರೆ ಕೊಟ್ಟ; ಇಲ್ಲದಿದ್ದರೆ ಇಲ್ಲ. ಅವನಿಗೆ ಮರ್ಯಾದೆ ಕೊಟ್ಟು, ಊಟ ಹಾಕಿ, ಸೇವೆ ಮಾಡಲು ಸಜ್ಜಾಗುವುದೇ ಹೆಣ್ಣಿನ ಬಾಳಾಗಿತ್ತು.

ಕೊಳೆಗೇರಿಗಳಲ್ಲಿ ಅಗತ್ಯವಿರುವಷ್ಟಾದರೂ ಸ್ಥಳವಿಲ್ಲ; ನೀರು-ಟಾಯ್ಲೆಟ್ ಸೌಲಭ್ಯವಿಲ್ಲ. ಮಕ್ಕಳಿಗೆ ಶಾಲೆಯಿಲ್ಲ. ಬೆಳಕಿಲ್ಲ; ರಸ್ತೆ-ಚರಂಡಿಯಿಲ್ಲ. ಯಾವುದೂ ವ್ಯವಸ್ಥಿತವಿಲ್ಲ. ಇದರಲ್ಲೇ ಬದುಕು ಸವೆಸುವ ಭಾರತದ ಈ ಪ್ರಜೆಗಳಿಗೆ ವಿಶೇಷ ಅರಿವೂ ಇಲ್ಲ. ತಮ್ಮ ಹಕ್ಕುಗಳ ಬಗ್ಗೆ ಪರಿಜ್ಞಾನವಿಲ್ಲ; ಜ್ಞಾನವಿದ್ದರೂ ಹೋರಾಟಕ್ಕೆ ವ್ಯವಧಾನವಿಲ್ಲ. ಹಾಗಾಗಿ ಅವರು ಅತ್ತ ಚುನಾಯಿತ ಪ್ರತಿನಿಧಿಗಳಿಂದ ಇತ್ತ ಅವರದೇ ಜಾತಿ/ವರ್ಗಕ್ಕೆ ಸೇರಿದ ಪುಢಾರಿಗಳಿಂದ ಶೋಷಣೆಗೆ ಒಳಗಾಗುತ್ತಿದ್ದರು.

* * *

ವಡಾಳಾ ಭಾಗದ ಕೊಳೆಗೇರಿಯ ಕಾರ್ಯಕ್ರಮಕ್ಕೆ ಹೋದಾಗ ಸಭೆ ಪ್ರಾರಂಭವಾಗುವುದು ತಡವಾಯಿತು. ಸಂಘಟಕರಿಗೆ ನನ್ನ ಪರಿಸ್ಥಿತಿ ತಿಳಿಸಿ, 'ನನಗೆ ಅನುಮತಿ ಕೊಡಿ; ಅಥವಾ ಭಾಷಣ ಮಾಡಲು ಬೇಗ ಅವಕಾಶ ಮಾಡಿಕೊಡಿ' ಎಂದೆ. ಒಪ್ಪಿದವರು ಯಥಾ ಪ್ರಕಾರ ಮುಖಂಡರಿಗೆ, ಗಣ್ಯರಿಗೆ ಭಾಷಣ ಮಾಡಲು ಅವಕಾಶ ಕೊಟ್ಟರು. ಹೆಣ್ಣು ಮಗಳು ಎಂದೋ, ನಮ್ಮ ಜಾತಿಯವಳು ಎಂದೋ ಒಂದು ರೀತಿಯ ನಿರ್ಲಕ್ಷ್ಯ ಅವರಲ್ಲಿರಬಹುದು. ಭಾಷಣ ಮುಗಿಸಿ ಮನೆ ತಲುಪುವ ಚಿಂತೆ ನನ್ನನ್ನು ಆವರಿಸಿತ್ತು.

ತಡವಾಗಿ ಪ್ರಾರಂಭವಾದ ಕಾರ್ಯಕ್ರಮದಲ್ಲಿ ನಾಲ್ಕು ಜನ ಭಾಷಣ ಬಿಗಿದ ಮೇಲೆ ನನ್ನ ಸರದಿ ಬಂತು. ನನಗೆ ತಾಳ್ಮೆ ಉಳಿದಿರಲಿಲ್ಲ. ಹಾಗಾಗಿ 5-10 ನಿಮಿಷಗಳಲ್ಲಿ ಮಾತಾಡಿ ಮುಗಿಸಿದೆ. ಸಮಯ 9.30 ಆಗಿತ್ತು. ಮನೆ ತಲುಪಲು ಒಂದು ಗಂಟೆಯಾದರೂ ಬೇಕು. ಆದರೂ ಸಂಘಟಕರು ನನ್ನನ್ನು ಕಳಿಸಿಕೊಡಲು ತಯಾರಿರಲಿಲ್ಲ.

ಅಷ್ಟರಲ್ಲಿ ನಾಲ್ಕಾರು ಮಹಿಳೆಯರು ಬಂದು 'ಅಕ್ಕಾವರೆ, ಇಷ್ಟು ಹೊತ್ತಿನಲ್ಲಿ ಎಲ್ಲಿ ಮನೆಗೆ ಹೋಗುತ್ತೀರಿ? ನಮ್ಮ ಮನೆಯಲ್ಲೇ ಉಳಿದು ಬಿಡ್ರಿ; ಮುಂಜಾನೆ ಹೋಗೀರಂತೆ' ಎಂದರು. ಅದು ಸಾಧ್ಯವಿತ್ತೆ? ಕೊಳೆಗೇರಿಯಲ್ಲಿ ಉಳಿಯುವ ಮನೋಬಲ ನನ್ನಲ್ಲಿತ್ತೆ? ತಡವಾಗಿ ಹೋದರೇನೇ ಮಿಸ್ಟರ್ ಪವಾರ್ ಮುಖ ನೋಡಲಾಗುವುದಿಲ್ಲ. ಇನ್ನು ರಾತ್ರಿ ಹೀಗೆ ಕೊಳೆಗೇರಿಯಲ್ಲಿ ಉಳಿದು, ಬೆಳಿಗ್ಗೆ ಮನೆಗೆ ಹೋದರೆ ನನಗೆ ಪ್ರವೇಶವಾದರೂ ಸಿಕ್ಕುತ್ತದೆಯೇ? ಗ್ಯಾರಂಟಿಯಿರಲಿಲ್ಲ.

*(ಮುಂದುವರಿಯುವುದು)*

Registered with Registrar of Newspapers of India under No. KARKAN/2007/22289
**'NAMMA MANASA'**, REGD. No. : MAG(3) NPP/399(A) / 2006-07 KA/BGS/2074/2010-12



# ದಿಗಿಲು ಹುಟ್ಟಿಸುತ್ತಿದೆ ಬದುಕು

ಇಲ್ಲಿ ನಾನೊಬ್ಬಳೇ
ಸುರಕ್ಷಿತವೆಂದು ಹೇಗೆ
ಭಾವಿಸಲಿ?
ಮೊನ್ನೆ ಮೊನ್ನೆಯವರೆಗೂ
ಹಾಗೇ ಅಂದುಕೊಂಡಿದ್ದೆ
ಅಲ್ಲಿ ಬಿದ್ದ ಬೆಂಕಿಯ ಉರಿ
ಇಲ್ಲಿ ತನಕ ತಟ್ಟುವವರೆಗೂ....
ಅವರೂರಿನಲ್ಲಿ ನೀರಿಗೆ ಬರ
ಕಣ್ಣೀರಿನಲ್ಲೇ ಕೈ ತೊಳೆಯುತ್ತಿದ್ದಾರೆ
ಎದುರಿಗಿಟ್ಟ ತಟ್ಟೆ ತುಂಬಾ ಭೋಜನ
ಬಿಸಿ ಆರಿ ತಣ್ಣಗಾಗಿದೆ
ಅನ್ನದ ಅಗಳು ನನ್ನ ಗಂಟಲಲ್ಲೇ
ನಿಂತಿದೆ.
ಅವರೆಲ್ಲರ ಭಾವ ಹೃದಯ
ಕಲ್ಲಾಗುತ್ತಿದೆ
ನನ್ನೆದೆ ಮೃದುವಾಗಿ ದ್ರವಿಸುತ್ತಿದೆ
ಅವರ ಮನಸ್ಸು.... ನನ್ನದೇ
ಮತ್ತೊಂದು ಹಿಸ್ಸೆ !
ಅಕೋ! ದೂರದಲ್ಲಿ ಮತ್ತೆ
ಬೆಂಕಿ ಬಿರುಗಾಳಿ
ನನ್ನ ಕಣ್ಣಿನ ಕಟ್ಟೆಯೊಡೆಯುತ್ತಿದೆ
ದಿಗಿಲು ಹುಟ್ಟಿಸುತ್ತಿದೆ ಬದುಕು
ಇಲ್ಲಿ ಯಾರು? ಎಲ್ಲಿಯವರೆಗೆ...
ಎಷ್ಟರಮಟ್ಟಿಗೆ ಸುರಕ್ಷಿತ?
ಕ್ಷಣ ಕ್ಷಣದ ಭಯ
ಅಭಯ ನೀಡಬಲ್ಲುದೇ?!

■ ಸ್ಮಿತಾ ಅಮೃತರಾಜ್
*ಸಂಪಾಜೆ, ಕೊಡಗು*

Registered
Magazine

*Posted on 9th of every month at MBC, Bangalore GPO*
*Total No. of Pages: 24*

*ವಿಳಾಸ :*
**ನಮ್ಮ ಮಾನಸ**
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018